CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೦೫ (ಆಶ್ವಯುಜ ೨೮, ಶಕ ವರ್ಷ ೧೯೨೭) | ಸಂಚಿಕೆ ೪೧ |
| --- | --- | --- |

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾನೂನು ಇಲಾಖೆ

**ಅಧಿಸೂಚನೆ ಸಂಖ್ಯೆ: ಲಾ 143 ಎಲ್‌ಎಜಿ 2002, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2005**

ಶ್ರೀ ಪ್ರಸನ್ನಕುಮಾರ್ .ಎಸ್, ವಕೀಲರು, ಹರಿಹರ, ಇವರನ್ನು ಈ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಈ ಎರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಸೌಲಭ್ಯಗಳು) ನಿಯಮಗಳ (1977) ರಲ್ಲಿನ ಷರತ್ತುಗಳಿಗೊಳಪಟ್ಟು ಹರಿಹರ ಅಪರ ಸರ್ಕಾರಿ ವಕೀಲರ ಹುದ್ದೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1335

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-1)

### ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ ತುಮಕೂರು ಇವರ ನ್ಯಾಯಾಲಯದಲ್ಲಿ ಮಿನಿ ವಿಧಾನ ಸೌಧ, 2ನೇ ಮಹಡಿ

**ವ್ಯಾಜ್ಯ ಸಂಖ್ಯೆ ಡಿಆರ್‌ಟಿ/01/2005-06**

**ವಾದಿ**

ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ,
ತಿಪಟೂರು ಇದರ ಕಾರ್ಯದರ್ಶಿ

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀಮತಿ ಶೈಲಜ ಕೋಂ ಲೇಟ್ ಬಿ. ಮಹಲಿಂಗಪ್ಪ
2. ಕುಮಾರಿ ಬಿ.ಎಂ. ಸೌಮ್ಯ (ಮೈನರ್) ಬಿನ್ ಲೇಟ್ ಬಿ. ಮಹಲಿಂಗಪ್ಪ.
3. ಕುಮಾರಿ ಬಿ.ಎಂ. ಸುಮ (ಮೈನರ್) ಬಿನ್ ಲೇಟ್ ಬಿ. ಮಹಲಿಂಗಪ್ಪ.
4. ಶ್ರೀ ನಾಗರಾಜು ಬಿನ್ ಲೇಟ್ ಶ್ರೀ ಬಿ. ಮಹಲಿಂಗಪ್ಪ ತಿಪಟೂರು ತಾಲ್ಲೂಕು-ಬೆಳಗರಹಳ್ಳಿ ವಾಸಿಗಳು (2 ಮತ್ತು 3ನೇ ಪ್ರತಿವಾದಿಗಳಿಗೆ 1ನೇ ಪ್ರತಿವಾದಿಯು ಪಾಲಕರಾಗಿರುತ್ತಾರೆ.)

**1959ನೇ ಇಸವಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ 103ನೇ ಕಲಂ ಅನ್ವಯ ತೀರ್ಪು ಪೂರ್ವ ಆಸ್ತಿ ಜಪ್ತಿ ಮಾಡಿರುವ ಬಗ್ಗೆ ನೋಟೀಸು**

ವಾದಿಯು 1959ನೇ ಇಸವಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ 70ನೇ ಕಲಂ ಅನ್ವಯ ದಿನಾಂಕ:25.8.2005 ರಂದು ಈ ನ್ಯಾಯಾಲಯದಲ್ಲಿ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಶ್ರೀ ಬಿ.ಮಹಲಿಂಗಪ್ಪ, ಬಿ. ನಾಗರಾಜ ಟ್ರೇಡರ್ಸ್ ತಿಪಟೂರು ಇವರಿಂದ ಬರಬೇಕಿದ್ದ ಒಟ್ಟು ರೂ.14,22,305/- (ಹದಿನಾಲ್ಕು ಲಕ್ಷ ಇಪ್ಪತ್ತೆರಡು ಸಾವಿರದ ಮೂರು ನೂರ ಐದು) ಗಳನ್ನು ಸಾಲಿಯಾನ ಶೇಕಡ 12ರ ಬಡ್ಡಿದರದೊಂದಿಗೆ ಶ್ರೀ ಬಿ. ಮಹಲಿಂಗಪ್ಪ ಇವರ ಆಸ್ತಿ ಹಕ್ಕು ಬದ್ಧ ವಾರಸುದಾರರಾದ ಪ್ರತಿವಾದಿಗಳಿಂದ ವಸೂಲಿ ಮಾಡಲು ವಾದಿ ಪರ ತೀರ್ಪು ಮತ್ತು ಡಿಕ್ರಿ ಮಾಡಲು ಕೋರಿರುತ್ತಾರೆ.

ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ ಡಿಆರ್‌ಟಿ/01/2005-06 ರನ್ವಯ ಈ ನ್ಯಾಯಾಲಯದ ಕಡತದಲ್ಲಿ ತೆಗೆದುಕೊಳ್ಳಲಾಗಿದೆ.

1,2,3 ಮತ್ತು 4ನೇ ಪ್ರತಿವಾದಿಗಳು, ಮೃತ ಶ್ರೀ ಬಿ. ಮಹಲಿಂಗಪ್ಪ ಇವರ ಕುಟುಂಬದ ಸದಸ್ಯರಾಗಿದ್ದು, ಅವರ ಆಸ್ತಿಯ ಹಕ್ಕುದಾರರಾಗಿರುತ್ತಾರೆ.

1ನೇ ಪ್ರತಿವಾದಿಯ ಪತಿ ಹಾಗೂ 2 ರಿಂದ 4ನೇ ಪ್ರತಿವಾದಿಗಳ ತಂದೆಯಾದ ಪವತಿ. ಬಿ. ಮಹಲಿಂಗಯ್ಯ ಇವರು ವಾದಿ ಸಂಘದ ನಾಮಿನಲ್ ಸದಸ್ಯರಾಗಿದ್ದು ವಾದಿ ಸಂಘದಲ್ಲಿ ವಿವಿಧ ದಿನಾಂಕಗಳಲ್ಲಿ ಖರೀದಿಸಿದ ಕೊಬ್ಬರಿಯ ಮೊಬಲಗು ಒಟ್ಟು ರೂ. 12,89,213-00 ಮತ್ತು ಈ ಖರೀದಿಗೆ ಮಾರಾಟ ತೆರಿಗೆ ರೂ. 48,622/- ಮತ್ತು ಶೇಕಡ 12 ರ ದರದಲ್ಲಿ ಬಡ್ಡಿ ರೂ. 84,470/- ಒಟ್ಟು 14,22,305/- (ಹದಿನಾಲ್ಕು ಲಕ್ಷದ ಇಪ್ಪತ್ತೆರಡು ಸಾವಿರದ ಮೂರು ನೂರ ಐದು) ರೂಪಾಯಿಗಳು ಪಾವತಿಸಬೇಕಿರುತ್ತದೆ ಎಂದು ವಾದಿಯು ದಾವಾ ಅರ್ಜಿಯಲ್ಲಿ ಹೇಳಿದ್ದು ವಾದಿಯು ಈ ದಾವಾ ಅರ್ಜಿಯೊಂದಿಗೆ 1959ನೇ ಇಸವಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ 103ನೇ ಕಲಂ ಅನ್ವಯ ಆದೇಶ ಪೂರ್ವ ಆಸ್ತಿಯ ಜಪ್ತಿಗೆ ಅರ್ಜಿಯನ್ನು ಸಲ್ಲಿಸಿ 1 ರಿಂದ 4 ರವರೆಗಿನ ಪ್ರತಿವಾದಿಗಳು ಲೇಟ್ ಶ್ರೀ ಮಹಲಿಂಗಪ್ಪ ಇವರು ಹೊಂದಿದ್ದ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಡಿಕ್ರಿ ಆದೇಶ ಕಾರ್ಯಗತಗೊಳಿಸುವುದನ್ನು ವಿಳಂಬ ಮಾಡುವ ಅಥವಾ ತಡೆಗಟ್ಟುವ ಉದ್ದೇಶದಿಂದ ಆಸ್ತಿಯನ್ನು ಇಡಿಯಾಗಿ ಅಥವಾ ಭಾಗಶಃ ಪರಾಧೀನ ಮಾಡುವರೆಂದು ಇದನ್ನು ತಡೆಗಟ್ಟದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವ ಅರ್ಜಿಯಲ್ಲಿ ಕೋರಿರುವ ರೀತ್ಯ ಈ ನ್ಯಾಯಾಲಯವು ತೀರ್ಪು/ಡಿಕ್ರಿ ನೀಡಿದರೂ ಸದರಿ ತೀರ್ಪಿನನ್ವಯ ಪ್ರತಿವಾದಿಗಳಿಂದ ವಾದಿ ಸಂಘಕ್ಕೆ ಬರಬೇಕಾದ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೆ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ವಾದಿಯ ಅರ್ಜಿ ಪರಿಶೀಲಿಸಿದ್ದು ವಾದಿಯ ಅಂಶಗಳು ಮೇಲ್ನೋಟಕ್ಕೆ ನಿಜವೆಂದು ಕಂಡು ಬಂದಿರುತ್ತದೆ. ಮತ್ತು ಮನವರಿಕೆಯಾಗಿರುತ್ತದೆ. ಆದ ಕಾರಣ ಈ ಕೆಳಕಂಡ ನೋಟೀಸ್ ಹಾಗೂ ಆದೇಶ ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/200/ದಿ:21.11.2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತ ಕೆ.ಎಲ್. ನರಸಿಂಹಮೂರ್ತಿ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಆದ ನಾನು ಶ್ರೀ ಬಿ. ಮಹಲಿಂಗಪ್ಪ (ಪವತಿ) ಪ್ರೊಪ್ರೈಟರ್, ಶ್ರೀ ನಾಗರಾಜು ಟ್ರೇಡರ್ಸ್ ಇವರ ಮತ್ತು ಹಾಲಿ ಒಂದನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ.

ಒಂದರಿಂದ ನಾಲ್ಕರವರೆಗಿನ ಪ್ರತಿವಾದಿಗಳು ಒಂದು ವೇಳೆ ತೀರ್ಪಿಗೆ ಪೂರ್ವ ಆಸ್ತಿ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ವ್ಯಾಜ್ಯದ ಮೊಬಲಗು ರೂ.14,24,425/- ಗಳನ್ನು ನಗದಾಗಿ ವಾದಿ ಸಂಘದಲ್ಲಿ ಅಮಾನತ್ತು ಲೆಕ್ಕದಲ್ಲಿ ಠೇವಣಿ ಮಾಡಿ ಠೇವಣಿ ರಸೀತಿಯನ್ನು ಅಥವಾ ಅಷ್ಟೇ ಮೌಲ್ಯದ ಬೇರೆ ಸ್ಥಿರಾಸ್ತಿಯನ್ನು ಈ ನ್ಯಾಯಾಲಯಕ್ಕೆ ಭದ್ರತೆಯಾಗಿ ಈ ಆದೇಶದ 30 ದಿವಸದೊಳಗೆ ನೀಡಲು ನಿರ್ದೇಶಿಸಿ ಈ ನೋಟೀಸ್ ನೀಡಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ಅವಧಿಯೊಳಗೆ ನಗದು ಭದ್ರತೆಯನ್ನು ಅಥವಾ ಇತರೆ ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ತೀರ್ಪು ಪೂರ್ವ ಆಸ್ತಿ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಜಪ್ತಿ ಆದೇಶಕ್ಕೆ ಒಳಗಾಗಿರುವ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ, ದಾನವಾಗಿ ಪಡೆಯಲು, ಭೋಗ್ಯಕ್ಕೆ ಅಥವಾ ಇತರೆ ಯಾವುದೇ ವಿಧವಾದ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಸ್ವಾಧೀನ, ಅಥವಾ ಹಕ್ಕು ಪಡೆಯಲು ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸ್ ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಆಸ್ತಿ ಜಪ್ತಿ ಆದೇಶಕ್ಕೆ ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

1) ತಿಪಟೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಆವರಣದಲ್ಲಿರುವ ನಿವೇಶನಗಳು.

1) ತಿಪಟೂರು ಮುನಿಸಿಪಲ್ ಖಾತೆ ಸಂಖ್ಯೆ 1674/1 (ಹಳೆಯದು) 2351, ಅಳತೆ 70X35 ಅಡಿಗಳು

**ಚೆಕ್ಕು ಬಂದಿ:-**

1) ಪೂರ್ವಕ್ಕೆ:- ಶ್ರೀರಾಮಕೃಷ್ಣ ಇವರ ಸ್ವತ್ತು

2) ಪಶ್ಚಿಮಕ್ಕೆ ಮತ್ತು ದಕ್ಷಿಣಕ್ಕೆ:- ಶ್ರೀ ಕೆ. ನಂಜುಂಡಶೆಟ್ಟಿ ಇವರ ಮಿಲ್.

3) ಉತ್ತರಕ್ಕೆ:- ರಸ್ತೆ. (ಈ ಮಧ್ಯ ಇರುವ ಸ್ವತ್ತು)

2) ತಿಪಟೂರು ಮುನಿಸಿಪಲ್ ಖಾತಾ ಸಂಖ್ಯೆ: 27/1544 (ಹಳೆಯದು)8/95/1544, ಅಳತೆ:-
57 X 100 ಮತ್ತು 47 X 32 ಅಡಿಗಳು ಇದರಲ್ಲಿರುವ ಕಟ್ಟಡ ಮತ್ತು ಖಾಲಿ ನಿವೇಶನ.

**ಚೆಕ್ಕುಬಂದಿ:-**

4) ಪೂರ್ವಕ್ಕೆ:- ಶ್ರೀ ಬಸವರಾಜು ಇವರಿಗೆ ಸೇರಿದ ಅಂಗಡಿ

5) ಪಶ್ಚಿಮಕ್ಕೆ ಮತ್ತು ಉತ್ತರಕ್ಕೆ:- ರಸ್ತೆ

6) ದಕ್ಷಿಣಕ್ಕೆ:- ಕನ್ಸರ್ವೆನ್ಸಿ.

(ಈ ಮಧ್ಯ ಇರುವ ಸ್ವತ್ತು)

(ಈ ಸ್ವತ್ತು ಶ್ರೀ ಬಿ. ಮಹಲಿಂಗಪ್ಪನವರ ಹೆಸರಿನಲ್ಲಿದ್ದು ಅವರು ಮೃತರಾದ ನಂತರ 1ನೇ ಪ್ರತಿವಾದಿಯ ಹೆಸರಿಗೆ ವರ್ಗಾಯಿಸಿ ಕೊಂಡಿರುತ್ತಾರೆ)

3) ತಿಪಟೂರು ತಾಲ್ಲೂಕು ನೊಣವಿನಕೆರೆ ಹೋಬಳಿಯ ಹೆಡಗರಹಳ್ಳಿ ಗ್ರಾಮದ ಜಮೀನುಗಳು

| | ಸರ್ವೆ ನಂಬರ್ ಮತ್ತು ಹಿಸ್ಸಾ | ವಿಸ್ತೀರ್ಣ (ಎಕರೆ ಮತ್ತು ಗುಂಟೆಯಲ್ಲಿ) | ಆಕಾರ | ಚೆಕ್ಕುಬಂದಿ | | | |
|---|---|---|---|---|---|---|---|
| | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 |
| 1 | 29/3ಎ | 0.15 | 000.59 | ರಸ್ತೆ | ರಸ್ತೆ | ಕೆಂಪದಾಸಣ್ಣನ ಜಮೀನು | ರಸ್ತೆ |
| 2 | 130 | 1.00 | | ರಸ್ತೆ | ರಸ್ತೆ | ರಸ್ತೆ | ಕೆಂಪದಾಸಣ್ಣನ ಜಮೀನು |
| 3 | 64 | 1.20 | 002.75 | ಕುಮಾರಯ್ಯ | ಶಂಕರಪ್ಪ | ರಸ್ತೆ | ಮೂಡ್ಲಪ್ಪ |
| 4 | 55/5ಎ | 0.20 | 000.79 | ಶಿವಯ್ಯ | ರತ್ನಮ್ಮ | ಕರಿಯಪ್ಪ | ಮೂಡ್ಲಪ್ಪ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 5 | 56/4ಪಿ-ಪಿ-3 | 0.37 | 001.33 | ಶಿವಯ್ಯ | ಮೂಡ್ಲಪ್ಪ | ಸ್ವಂತ | ದಾರಿ |
| 6 | 48/1 | 1.27 | 002.64 | ಶಿವಯ್ಯ | ಮೂಡ್ಲಪ್ಪ | ಸ್ವಂತ | ದಾರಿ |
| | ತಿಪಟೂರು ತಾಲ್ಲೂಕು ನೊಣವಿನಕೆರೆ ಹೋಬಳಿಯ ಬೆಳಗರಹಳ್ಳಿ ಗ್ರಾಮದ ಜಮೀನುಗಳು | | | | | | |
| 7 | 150 | 2.13 | 002.52 | ರಸ್ತೆ | ರಸ್ತೆ | ಮಾಳಶೆಟ್ಟಿಹಳ್ಳಿ, ಮಹಲಿಂಗಪ್ಪ | ನಾಗರಾಜು |
| 8 | 151/2 | 1.36 | 1.36.00 | ರಸ್ತೆ | ರಸ್ತೆ | ಮಾಳಶೆಟ್ಟಿಹಳ್ಳಿ, ಮಹಲಿಂಗಪ್ಪ | ನಾಗರಾಜು |
| 9 | 151/3ಎ | 0.28 | 000.82 | ರಸ್ತೆ | ರಸ್ತೆ | ಮಾಳಶೆಟ್ಟಿಹಳ್ಳಿ, ಮಹಲಿಂಗಪ್ಪ | ನಾಗರಾಜು |
| 10 | 151/3ಬಿ | 0.28 | 000.82 | ರಸ್ತೆ | ರಸ್ತೆ | ಮಾಳಶೆಟ್ಟಿಹಳ್ಳಿ, ಮಹಲಿಂಗಪ್ಪ | ನಾಗರಾಜು |
| 11 | 126/2ಪಿ | 1.03 ಎಕರೆ | | ಹೇಮಾವತಿ ನಾಲೆ | ಮಹೇಶ್ ಸ್ವತ್ತು | ಸ್ವಂತ ಸ್ವತ್ತು | ಜಗದೀಶ್ ಸ್ವತ್ತು |
| 12 | 10/3 | 0.20 | | ಬಸವಣ್ಣ ಮತ್ತು ಇತರೆಯವರ ಸ್ವತ್ತು | ಶಿವಣ್ಣನವರ ಸ್ವತ್ತು | ನಂಜಾಮರಿ ಸ್ವತ್ತು | ರಸ್ತೆ |
| 13 | 165/1ಎ | 0.19 | 000.66 | ಗುರುಸಿದ್ದಪ್ಪನವರ ಸ್ವತ್ತು | ಬಸವಣ್ಣನವರ ಸ್ವತ್ತು | ನಿರಂಜನಮೂರ್ತಿ ಯವರ ಸ್ವತ್ತು | ಹೇಮಾವತಿ ನಾಲೆ |

2005ನೇ ಇಸವಿ ಆಗಸ್ಟ್ ಮಾಹೆ 25.8.2005ನೇ ದಿನಾಂಕದಂದು ಈ ನ್ಯಾಯಾಲಯದ ಮೊಹರಿನೊಂದಿಗೆ ನೀಡಿದೆ.

**ಕೆ.ಎಲ್. ನರಸಿಂಹಮೂರ್ತಿ**

ಪಿ.ಆರ್. 1336 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

## ಕರ್ನಾಟಕ ಸರ್ಕಾರದ ಸಚಿವಾಲಯ ತರಬೇತಿ ಸಂಸ್ಥೆ, 8ನೇ ಮಹಡಿ, ವಿ.ವಿ. ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಸತಸಂ:43 ಸಿಬ್ಬಂದಿ 2005, ದಿನಾಂಕ: 16ನೇ ಸೆಪ್ಟೆಂಬರ್ 2005**

ಕೇಂದ್ರ ಮಾಹಿತಿ ಹಕ್ಕು ಕಾಯಿದೆ (ಕೇಂದ್ರ ಕಾಯಿದೆ 22/2005)ರ ಸೆಕ್ಷನ್ 5(1) ಮತ್ತು 5(2) ಹಾಗೂ 19ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರಿ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು, ಇದಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿಗಳನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಾರ್ವಜನಿಕ ಮಾಹಿತಿ ಅಧಿಕಾರಿ, ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಲಾಗಿದೆ.

| ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|
| ಸಹಾಯಕ ನಿರ್ದೇಶಕರು, ಕರ್ನಾಟಕ ಸರ್ಕಾರಿ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು. | ಉಪ ನಿರ್ದೇಶಕರು, ಕರ್ನಾಟಕ ಸರ್ಕಾರಿ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು. | ನಿರ್ದೇಶಕರು, ಕರ್ನಾಟಕ ಸರ್ಕಾರಿ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು |

**ಎಚ್.ಎಸ್. ವೆಂಕಟೇಶಯ್ಯ**

ಪಿ.ಆರ್. 1337 ನಿರ್ದೇಶಕರು, ಸಚಿವಾಲಯ ತರಬೇತಿ ಸಂಸ್ಥೆ ಬೆಂಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಕಾರ್ಯಾಲಯದ ನಡವಳಿಗಳು

**ವಿಷಯ:** ಶ್ರೀಮತಿ ಗೀತಾ ಎನ್, ಚಿತ್ರಗಿಮಠ, ಶುಶ್ರೂಷಕಿ, ಪ್ರಾ.ಆ. ಕೇಂದ್ರ, ಗೋಕರ್ಣ, ಕುಮಟಾ ತಾ: ಉಡುಪಿ ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರ ಸಂ:ಡಿಪಿಎನ್(14)ಸಿಆರ್:90:01-02, ದಿ:14.6.02.
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ 4.10.02.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್(14)ಸಿಆರ್: 90:01-02; ದಿ:12.12.02.
4. ವಿಚಾರಣಾ ವರದಿಯ ಸಂ:ಮುಜಾಅ:ಜಾಕೋ:ಎನ್‌ಜಿ:211:02-03, ದಿ:20.11.03.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರ ಸಂ:ಡಿಪಿಎನ್(14)90:01-02, ದಿ:31.12.03.
6. ಪತ್ರಿಕಾ ಪ್ರಕಟಣೆ ದಿ:8.6.05 ಮತ್ತು 1.6.05.

**ಪ್ರಸ್ತಾವನೆ:**

ಶ್ರೀಮತಿ ಗೀತಾ ಎನ್. ಚಿತ್ರಗಿಮಠ, ಶುಶ್ರೂಷಕಿ, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಗೋಕರ್ಣ, ಕುಮಟ ತಾ: ಉಡುಪಿ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:21.1.92 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾಗೃತಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4) ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸದೇ ಇರುವುದರಿಂದ, ಮೇಲೆ ಓದಲಾದ (6) ರಲ್ಲಿನ ರಾಜ್ಯದ ಎರಡು ಪ್ರಮುಖ ದಿನಪತ್ರಿಕೆಗಳಲ್ಲಿ ವಿಚಾರಣೆ ವರದಿ ಬಗ್ಗೆ ಪ್ರಕಟಿಸಲಾಗಿದೆ.

ನೌಕರರು ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೇ ಇರುವುದರಿಂದ, ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ:ಡಿಪಿಎನ್(14)ಸಿಆರ್:90:2001-02, ಬೆಂಗಳೂರು ದಿನಾಂಕ: 12ನೇ ಸೆಪ್ಟೆಂಬರ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ:ಬೆನಿಟಾ.ವಿ.ಡೇವಿಡ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ಗೀತಾ.ಎನ್.ಚಿತ್ರಗಿಮಠ, ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಗೋಕರ್ಣ, ಕುಮಟ ತಾ: ಉಡುಪಿ ಜಿಲ್ಲೆ ಇವರು ದಿ:21.1.92 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾಗಿರುವುದು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ, ದಂಡನೆಯಾಗಿ ಸದರಿ ನಿಯಮ 8 (viii) ರ ಪ್ರಕಾರ ನೌಕರರು ಪುನಃ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1338 **ಡಾ:ಬೆನಿಟಾ.ವಿ.ಡೇವಿಡ್**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು.

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು

**ವಿಷಯ:** ಶ್ರೀಮತಿ ಕೇಶಮ್ಮ.ಎಂ. ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬೆಳವಣಿಕಿ, ರೋಣ ತಾಲ್ಲೂಕು, ಗದಗ್ ಜಿಲ್ಲೆ, ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ:ಡಿಪಿಎನ್(13)ಸಿಆರ್:12: 2001-02, ದಿ:3.9.2001.
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ 28.9.2001.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ:ಡಿಪಿಎನ್(13)ಸಿಆರ್-12:2001-02, ಬೆಂಗಳೂರು, ದಿ: 30.5.2002.
4. ವಿಚಾರಣಾ ವರದಿಯ ಸಂಖ್ಯೆ:ವಿಅ:ವಿಚಾರಣೆ:ಎನ್‌ಜಿ:36:02-03, ದಿ:19.11.03.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ:ಡಿಪಿಎನ್(13):ಸಿಆರ್-12:2001-02, ದಿ:01-01-04 ಮತ್ತು ನೆನಪೋಲೆ ದಿನಾಂಕ:28.6.2004.
6. ಪತ್ರಿಕಾ ಪ್ರಕಟಣೆಗಳು ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿನಾಂಕ:01.6.2005 ಮತ್ತು ವಿಜಯ ಕರ್ನಾಟಕ ದಿನಾಂಕ:8.6.2005.

**ಪ್ರಸ್ತಾವನೆ:**

ಶ್ರೀಮತಿ ಕೇಶಮ್ಮ.ಎಂ., ಶುಶ್ರೂಷಕಿ, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಬೆಳವಣಿಕಿ, ರೋಣ ತಾಲ್ಲೂಕು, ಗದಗ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿ:18.9.2000 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾದ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾಗೃತಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4) ರಲ್ಲಿನ ಆದೇಶದಂತೆ, ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ, ಮೇಲೆ ಓದಲಾದ (5) ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ನೌಕರರು ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸದೇ ಇರುವುದರಿಂದ, ಮೇಲೆ ಓದಲಾದ (6) ರಲ್ಲಿ ಸಂಯುಕ್ತ ಕರ್ನಾಟಕ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳಲ್ಲಿ ಪತ್ರಿಕಾ ಪ್ರಕಟಣೆಯಲ್ಲಿ ನೀಡಲಾಗಿತ್ತು.

ನೌಕರರು ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೇ ಇರುವ ಕಾರಣ, ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ:ಡಿಪಿಎನ್(13)ಸಿಆರ್-12:2001-02, ಬೆಂಗಳೂರು**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ:ಬೆನಿಟಾ.ವಿ.ಡೇವಿಡ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಆದ ನಾನು ಶ್ರೀಮತಿ ಕೇಶಮ್ಮ.ಎಂ., ಶುಶ್ರೂಷಕಿ, ಇವರು ದಿ:18.9.2000 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾಗಿರುವುದು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ, ದಂಡನೆಯಾಗಿ ಸದರಿ ನಿಯಮ 8 (viii) ರ ಪ್ರಕಾರ ಈ ಕೂಡಲೇ ಜಾರಿಗೆ ಬರುವಂತೆ ಪುನಃ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಸೇವೆಯಿಂದ ವಜಾಗೊಳಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1339

**ಡಾ:ಬೆನಿಟಾ.ವಿ.ಡೇವಿಡ್**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು.

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು

**ವಿಷಯ:** ಶ್ರೀ ಎಂ.ಕೆ. ಕೋಳೆಕರ್, ಕಿರಿಯ ಪುರುಷ ಆರೋಗ್ಯ ಸಹಾಯಕರು, ಪ್ರಾಥಮಿಕ ಆರೋಗ್ಯ ಕೇಂದ್ರ, ಮದಬಾವಿ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖಾ ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ:**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ:ಡಿಪಿಎನ್(14)ಸಿಆರ್:27: 2000-01, ದಿ:10.1.2001.
2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶದ ಸಂಖ್ಯೆ:ಡಿಪಿಎನ್(14)ಸಿಆರ್-27:2000-01, ದಿ: 13.6.2002.
3. ವಿಚಾರಣಾ ವರದಿಯ ಸಂಖ್ಯೆ:ಮುಜಾಅ:ಜಾಕೋ:ಎನ್‌ಜಿ-69:2002-03, ದಿನಾಂಕ:13.12.2002.
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ:ಡಿಪಿಎನ್(14):ಸಿಆರ್-27:2000-01, ದಿ:24.3.2003 ಮತ್ತು 24.3.2003.
5. ಪತ್ರಿಕಾ ಪ್ರಕಟಣೆ ದಿನಾಂಕ:01.6.2005 ಮತ್ತು 8.6.2005.

**ಪ್ರಸ್ತಾವನೆ:**

ಶ್ರೀ ಎಂ.ಕೆ. ಕೋಳೆಕರ್, ಕಿರಿಯ ಪುರುಷ ಆರೋಗ್ಯ ಸಹಾಯಕರು, ಪ್ರಾಥಮಿಕ ಆರೋಗ್ಯ ಕೇಂದ್ರ, ಮದಬಾವಿ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರು ಈ ಹಿಂದೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:14.2.1998 ರಿಂದ ದಿನಾಂಕ:1.11.2000 ರವರೆಗೆ ಅನಧಿಕೃತ ಗೈರುಹಾಜರಿಯಾದ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ. ಆದಕಾರಣ, ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾಗೃತ ಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (3) ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ, ಮೇಲೆ ಓದಲಾದ (4) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (5)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸದೇ ಇರುವುದರಿಂದ, ರಾಜ್ಯದ ಎರಡು ಪ್ರಮುಖ ದಿನಪತ್ರಿಕೆಗಳಲ್ಲಿ ಪ್ರಕಟಿಸಲಾಗಿಯೂ ಸಹ ನೌಕರರು ತನ್ನ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಆದಕಾರಣ, ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ:ಡಿಪಿಎನ್(14):ಸಿಆರ್-27:2000-01, ಬೆಂಗಳೂರು ದಿನಾಂಕ: 12ನೇ ಸೆಪ್ಟೆಂಬರ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ:ಬೆನಿಟಾ.ವಿ.ಡೇವಿಡ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಆದ ನಾನು ಶ್ರೀ ಎಂ.ಕೆ. ಕೋಳೆಕರ್, ಕಿರಿಯ ಪುರುಷ ಆರೋಗ್ಯ ಸಹಾಯಕರು, ಪ್ರಾಥಮಿಕ ಆರೋಗ್ಯ ಕೇಂದ್ರ, ಮದಬಾವಿ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರು ದಿನಾಂಕ:14.2.1998 ರಿಂದ ದಿನಾಂಕ: 1.11.2000 ರವರೆಗೆ ಅನಧಿಕೃತ ಗೈರುಹಾಜರಿಯಾಗಿರುವುದು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ, ದಂಡನೆಯಾಗಿ ಸದರಿ ನಿಯಮ 8 (viii) ರ ಪ್ರಕಾರ ನೌಕರರು ಪುನಃ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1340 **ಡಾ:ಬೆನಿಟಾ.ವಿ.ಡೇವಿಡ್**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು.

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು

**ವಿಷಯ:** ಶ್ರೀಮತಿ ಎಸ್.ಎನ್. ಉಗ್ರಾಣಕರ್, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಪ್ರಾಥಮಿಕ ಆರೋಗ್ಯ ಕೇಂದ್ರ, ಸೈದಾಪುರ ಗುಲ್ಬರ್ಗಾ ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ:ಡಿಪಿಎನ್(16)ಸಿಆರ್:36: 94-95, ದಿ:16.1.2001.
2. ನೌಕರರ ಲಿಖಿತ ಅಹವಾಲು ಬಂದಿರುವುದಿಲ್ಲ.
2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ:ಡಿಪಿಎನ್(16)ಸಿಆರ್-36:94-95, ದಿ: 30.8.2001.
3. ವಿಚಾರಣಾ ವರದಿಯ ಸಂಖ್ಯೆ:ಮುಜಾಅ:ಜಾಕೋ:ಎನ್‌ಜಿ-77:2002-03, ದಿನಾಂಕ:9.2.2003.
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ:ಡಿಪಿಎನ್:16:ಸಿಆರ್:36:94-95, ದಿ:24.3.03.
5. ದಿನಪತ್ರಿಕಾ ಪ್ರಕಟಣೆಯ ತಿಳುವಳಿಕೆ ನೋಟೀಸ್ ಸಂಖ್ಯೆ:ಡಿಪಿಎನ್ (12) ಸಿಆರ್:98:05-06 ದಿನಾಂಕ:1.6.2005 ಸಂಯುಕ್ತ ಕರ್ನಾಟಕ ದಿನಪತ್ರಿಕೆ.

**ಪ್ರಸ್ತಾವನೆ:**

ಶ್ರೀಮತಿ ಎಸ್.ಎನ್. ಉಗ್ರಾಣಕರ್, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸೈದಾಪುರ, ಗುಲ್ಬರ್ಗಾ ಜಿಲ್ಲೆ, ಇವರು ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಸೈದಾಪುರ ಗುಲ್ಬರ್ಗಾ ಜಿಲ್ಲೆ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:6.1.1986 ರಿಂದ ದಿನಾಂಕ:2.3.1990 ರವರೆಗೆ ಅನಧಿಕೃತ ಗೈರುಹಾಜರಿಯಾದ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2)ರಲ್ಲಿ ಲಿಖಿತ ಅಹವಾಲನ್ನು ನೀಡಿರುವುದಿಲ್ಲವಾದುದರಿಂದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು (ಜಾಗೃತ ಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು ಮೇಲೆ ಓದಲಾದ (4) ರಂತೆ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲವಾದುದರಿಂದ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣೆ ವರದಿಯನ್ನು ಪರಿಗಣಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ:ಡಿಪಿಎನ್(16):ಸಿಆರ್-36:94-95, ಬೆಂಗಳೂರು ದಿನಾಂಕ: 12ನೇ ಸೆಪ್ಟೆಂಬರ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ:ಬೆನಿಟಾ.ವಿ.ಡೇವಿಡ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರು ದಿನಾಂಕ:6.1.1986 ರಿಂದ ದಿನಾಂಕ: 2.3.1990 ರವರೆಗೆ ಅನಧಿಕೃತ ಗೈರುಹಾಜರಿಯಾಗಿರುವುದು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುವುದರಿಂದ ದಂಡನೆಯಾಗಿ ಸದರಿ ನಿಯಮ 8 (viii) ರನ್ವಯ ಪುನಃ ಸರ್ಕಾರ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1341 **ಡಾ:ಬೆನಿಟಾ.ವಿ.ಡೇವಿಡ್**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಕಾರ್ಯಾಲಯದ ನಡವಳಿಗಳು, ಬೆಂಗಳೂರು-9

**ವಿಷಯ:** ಶ್ರೀಮತಿ ಸಿ.ಎ. ಸಯೆಂದ್ರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಸಾರ್ವಜನಿಕ ಆಸ್ಪತ್ರೆ, ಆಳಂದ, ಗುಲ್ಬರ್ಗಾ ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ:ಡಿಪಿಎನ್(16):49:94-95, ದಿ:5.5.95.
2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ:ಡಿಪಿಎನ್(16)49:94-95 ಬೆಂಗಳೂರು ದಿ: 6.5.02.
3. ವಿಚಾರಣಾ ವರದಿಯ ಸಂಖ್ಯೆ:ಮುಜಾಅ:ಜಾಕೋ:ಎನ್‌ಜಿ-17:2002-03, ದಿನಾಂಕ:4.4.03.
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ:ಡಿಪಿಎನ್:10:ಸಿಆರ್:44:94-95, ದಿ:17.5.03.
5. ನಿರ್ದೇಶನಾಲಯದ ನೆನಪೋಲೆ ಡಿಪಿಎನ್ (16)ಸಿಆರ್-49:94-95 ದಿನಾಂಕ:28.8.04.
5. ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ತಿಳುವಳಿಕೆ ನೋಟೀಸಿನ ಸಂಖ್ಯೆ:ಡಿಪಿಎನ್ (12) ಸಿಆರ್:08: 05-06 ದಿನಾಂಕ:1.6.2005.

**ಪ್ರಸ್ತಾವನೆ:**

ಶ್ರೀಮತಿ ಸಿ.ಎ.ಸಯೆಂದ್ರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಸಾರ್ವಜನಿಕ ಆಸ್ಪತ್ರೆ, ಆಳಂದ, ಗುಲ್ಬರ್ಗಾ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:5.7.70 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾದ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರ ಮೇಲೆ ಓದಲಾದ (2)ರ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು (ಜಾಗೃತ ಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (3) ರಂತೆ ವಿಚಾರಣಾಧಿಕಾರಿಗಳು, ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ 4 ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ ನೌಕರರು ಲಿಖಿತ ಅಹವಾಲು ಸಲ್ಲಿಸಿಲ್ಲದಿರುವುದರಿಂದ ಮೇಲೆ ಓದಲಾದ (5) ರಲ್ಲಿ ನೆನಪೋಲೆಯನ್ನು ಜಾರಿಮಾಡಲಾಗಿ ಲಿಖಿತ ಹೇಳಿಕೆ ಬಂದಿರುವುದಿಲ್ಲದಿರುವುದರಿಂದ ಮೇಲೆ ಓದಲಾದ (6)ರಲ್ಲಿ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾಗಿದ್ದು, ಅದಕ್ಕೂ ಸಹಾ ಅಹವಾಲು ನೀಡಿರುವುದಿಲ್ಲ.

ಆದುದರಿಂದ ನೌಕರರ ಲಿಖಿತ ಅಹವಾಲು ಸಲ್ಲಿಸದಿರುವ ಪ್ರಯುಕ್ತ ಹಾಗೂ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶದ ಸಂಖ್ಯೆ:ಡಿಪಿಎನ್:16:49:94-95, ಬೆಂಗಳೂರು ದಿನಾಂಕ: 30ನೇ ಆಗಸ್ಟ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ:ಬೆನಿಟಾ.ವಿ.ಡೇವಿಡ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ.ಸಿ.ಎ.ಸಯೆಂದ್ರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರು ದಿನಾಂಕ:5.7.70 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾಗಿರುವುದು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುವುದರಿಂದ ದಂಡನೆಯಾಗಿ ಸದರಿ ನಿಯಮ 8 (viii) ರನ್ವಯ ಪುನಃ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1342

**ಡಾ:ಬೆನಿಟಾ.ವಿ.ಡೇವಿಡ್**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು.

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ನಡವಳಿಗಳು

**ವಿಷಯ:** ಶ್ರೀಮತಿ ಪಿ. ಸೌಮಿತ್ರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಗುರುದೇವರಹಳ್ಳಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಇವರ ಗೈರುಹಾಜರಿ - ನಕಲಿ ಟಿಪ್ಪಣಿ ತಯಾರಿಸಿ ದುರುಪಯೋಗ ಪಡಿಸಿಕೊಂಡಿರುವುದರ ಆರೋಪದ ಬಗ್ಗೆ ಅಂತಿಮ ಆದೇಶ.

**ಉಲ್ಲೇಖ:**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ:ಡಿಪಿಎನ್(6):ಸಿಆರ್-28: 2001-02, ದಿ:14.3.2002.
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ:
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ:ಡಿಪಿಎನ್(6)ಸಿಆರ್-28:2001-02, ದಿ: 25.9.2001.
4. ವಿಚಾರಣಾ ವರದಿಯ ಸಂಖ್ಯೆ:ವಿಆ:ವಿಚಾರಣೆ:ಎನ್‌ಜಿ:80:01-02, ದಿನಾಂಕ:21.11.2003.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ:ಡಿಪಿಎನ್(6):ಸಿಆರ್-28:2001-02, ದಿ:16.12.03.
6. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಮಂಡ್ಯ ಜಿಲ್ಲೆ ಇವರ ಪತ್ರ ಸಂಖ್ಯೆ:ಸಿಬ್ಬಂದಿ(2):680: 03-04, ದಿನಾಂಕ:2.7.2004.
7. ನಿರ್ದೇಶನಾಲಯದಿಂದ ಜಾರಿ ಮಾಡಲಾದ ತಿಳುವಳಿಕೆ ಹಾಗೂ ಸೂಚನಾ ಪತ್ರ ಸಂಖ್ಯೆ:ಡಿಪಿಎನ್(6):ಸಿಆರ್-28: 2001-02, ದಿನಾಂಕ:17.1.2005.
8. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ ಗುರುದೇವರಹಳ್ಳಿ, ಮದ್ದೂರು ತಾಲ್ಲೂಕು ಮಂಡ್ಯ ಜಿಲ್ಲೆ, ಇವರ ಪತ್ರ ಸಂಖ್ಯೆ:ಪಿಹೆಚ್‌ಸಿ:ಬಿಡಿಹೆಚ್:80:05-06, ದಿನಾಂಕ:5.6.2005.

**ಪ್ರಸ್ತಾವನೆ:**

ಶ್ರೀಮತಿ ಪಿ. ಸೌಮಿತ್ರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಆದ ಇವರು ಪ್ರಾಥಮಿಕ ಆರೋಗ್ಯ ಕೇಂದ್ರ, ಗುರುದೇವರಹಳ್ಳಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ವರ್ಗಾವಣೆಗೆ ಸಂಬಂಧಿಸಿದಂತೆ ದಿನಾಂಕ: 24.9.1996 ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿಯನ್ನು ಸಲ್ಲಿಸಿದ್ದು, ಈ ಸಂಬಂಧದಲ್ಲಿ ದಿನಾಂಕ:24.9.1996 ರಲ್ಲಿ ಹೊರಡಿಸಿರುವ ಟಿಪ್ಪಣಿಯು ಸ್ವತಃ ಅಂದಿನ ಮಾನ್ಯ ಮುಖ್ಯಮಂತ್ರಿಯವರೇ ತಮ್ಮಿಂದಾಗಲೀ ಅಥವಾ ಕಛೇರಿಯಿಂದಾಗಲೀ ಹೊರಡಿಸಿಲ್ಲವೆಂದು ತಿಳಿಸಿದ್ದರ ಮೇರೆಗೆ, ಸದರಿ ಆರೋಪದ ಬಗ್ಗೆ ಉಲ್ಲೇಖ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಪ್ರಕರಣದ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ, ಮೇಲೆ ಓದಲಾದ ಉಲ್ಲೇಖ (3)ರಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು, ಜಾಗೃತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (4) ರಂತೆ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕಗುಣವಾಗಿ ಲಿಖಿತ ಅಹವಾಲನ್ನು ಸಲ್ಲಿಸದೇ ದಿನಾಂಕ:20.8.2003 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿ ಆಗಿರುವ ಬಗ್ಗೆ ಉಲ್ಲೇಖ (6)ರ ಪತ್ರದಲ್ಲಿ ತಿಳಿಸಿದ್ದು, ಮೇಲೆ ಓದಲಾದ ಉಲ್ಲೇಖ (7)ರಲ್ಲಿ ಅನಧಿಕೃತ ಗೈರುಹಾಜರಿ ಆರೋಪದ ಬಗ್ಗೆ ದೋಷಾರೋಪಣೆ ಪಟ್ಟಿಯನ್ನು ಜಾರಿ ಮಾಡಲಾಗಿ, ಉಲ್ಲೇಖ (8)ರಲ್ಲಿ ನೌಕರರು ಗೈರುಹಾಜರಿಯಲ್ಲೇ ಮುಂದುವರಿದಿರುವುದಾಗಿ ವರದಿ ನೀಡಲಾಗಿರುತ್ತದೆ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಇವರು ನೀಡಿರುವ ವರದಿಯಂತೆ ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿನ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಡಿಪಿಎನ್(6):ಸಿಆರ್-28:2001-02, ಬೆಂಗಳೂರು ದಿನಾಂಕ: 29ನೇ ಆಗಸ್ಟ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ:ಬೆನಿಟಾ.ವಿ.ಡೇವಿಡ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ. ಪಿ. ಸೌಮಿತ್ರ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಗುರುದೇವರಹಳ್ಳಿ, ಮದ್ದೂರು ತಾ: ಮಂಡ್ಯ ಜಿಲ್ಲೆ, ಇವರು ನಕಲಿ ಟಿಪ್ಪಣಿ ತಯಾರಿಸಿ ಕರ್ತವ್ಯಲೋಪ, ದುರ್ನಡತೆ ಆರೋಪದ ಮೇಲೆ ಹಾಗೂ ದಿನಾಂಕ:20.8.2003 ರಿಂದ ಅನಧಿಕೃತ ಗೈರುಹಾಜರಿ ಆಗಿರುವ ಬಗ್ಗೆ ದಂಡನೆಯಾಗಿ ಕೆ.ಸಿ.ಎಸ್. (ಸಿಸಿಎ) ನಿಯಮ 8 (viii) ರ ಪ್ರಕಾರ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1343 **ಡಾ:ಬೆನಿಟಾ.ವಿ.ಡೇವಿಡ್**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

## ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಇವರ ಕಾರ್ಯವಾಹಿಗಳು

**ವಿಷಯ:** ಸಮಾಪನೆಯಲ್ಲಿರುವ ಮೊಳಕಾಲ್ಮೂರು ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ. ಮೊಳಕಾಲ್ಮೂರು ತಾಲ್ಲೂಕು, ಮೊಳಕಾಲ್ಮೂರು ಇದನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಮಸಂಖ್ಯೆ:ದಿನಾಂಕ:18.3.2002.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಇವರು ಸಲ್ಲಿಸಿರುವ ಪ್ರಸ್ತಾವೆ ಸಂಖ್ಯೆ:ಸನಿ30:ಸಮಾಪನೆ: ಸಿಆರ್-02 2005-06 ದಿನಾಂಕ:28.3.2005.

**ಪ್ರಸ್ತಾವನೆ:**

ವಿಷಯದಲ್ಲಿ ನಮೂದಿಸಿರುವ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಮೊಳಕಾಲ್ಮೂರು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರು ಸಂಘದ ಪ್ರಭಾರವನ್ನು ವಹಿಸಿಕೊಳ್ಳುವ ಹಂತದಲ್ಲಿ ಸಂಘ ಆಡಳಿತ ಮಂಡಳಿಯವರು ಸಂಘವನ್ನು ಪುನಶ್ಚೇತನಗೊಳಿಸಿಕೊಟ್ಟಲ್ಲಿ ಮುಂದೆ ಸುಗಮವಾಗಿ ನಡೆಸಿಕೊಂಡು ಹೋಗುವುದಾಗಿ ದಿ:12.1.2005 ರಂದು ನಡೆದ ಪುನಶ್ಚೇತನ ಸಭೆಯಲ್ಲಿ ಕೋರಿಕೊಂಡು ಪುನಶ್ಚೇತನ ಆದೇಶ ನೀಡುವಂತೆ ವಿನಂತಿಸಿರುವುದರ ಮೇರೆಗೆ ಉಲ್ಲೇಖ (2) ರನ್ವಯ ಚಿತ್ರದುರ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರವರು ಸಂಘವನ್ನು ಪುನಶ್ಚೇತನಗೊಳಿಸಿ ಆದೇಶ ನೀಡಲು ವಿನಂತಿಸಿರುತ್ತಾರೆ. ಸದರಿಯವರ ಮನವಿಯನ್ನು ಪುರಸ್ಕರಿಸಿ ಸಂಘ ಆರ್ಥಿಕ ಸ್ಥಿತಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ವ್ಯವಹಾರಗಳನ್ನು ಹೆಚ್ಚಿಸುವ ಬಗ್ಗೆ ಸೂಕ್ತ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳುವ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಶ್ಚೇತನಗೊಳಿಸುವ ಅಭಿಪ್ರಾಯಕ್ಕೆ ಬರಲಾಗಿದ್ದು ಕೆಳಕಂಡ ಷರತ್ತುಗಳನ್ನು ವಿಧಿಸಲಾಗಿದೆ.

**ಷರತ್ತುಗಳು**

1) ಸಹಕಾರ ಸಂಘಗಳ ತಿದ್ದುಪಡಿ ಕಾಯ್ದೆ ರೀತ್ಯಾ ಮುಂದಿನ 5 ವರ್ಷಗಳ ಅವಧಿಗೆ ಆಡಳಿತ ಮಂಡಳಿ ಸದಸ್ಯರನ್ನು ಆಯ್ಕೆ ಮಾಡಲು ಕ್ರಮವಿಡತಕ್ಕದ್ದು.
2) ಸಂಘದ ಸದಸ್ಯರನ್ನು ಹೆಚ್ಚಿಸಿ ಷೇರು ಬಂಡವಾಳವನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ಕ್ರಮವಿಡುವುದು.
3) ಸಂಘಕ್ಕೆ ಪೂರ್ಣಾವಧಿಯ ಕಾರ್ಯದರ್ಶಿಯವರನ್ನು ನೇಮಕ ಮಾಡಿಕೊಂಡು ಸಂಘದ ವ್ಯವಹಾರಗಳನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ಸಂಘದ ಉಪನಿಯಮಗಳನ್ವಯ ನಡೆಸಿಕೊಂಡು ಹೋಗತಕ್ಕದ್ದು.
4) ಸಂಘವು ಸಲ್ಲಿಸಿರುವ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮವನ್ನು ರೂಪಿಸಿಕೊಂಡು, ಸಂಘದ ಅಭಿವೃದ್ಧಿಗೆ, ಕ್ರಮವಿಡುವುದು.

ಮೇಲ್ಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಶ್ಚೇತನಗೊಳಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್‌ಡಿ:ಸಮಾಪನೆ:ಸಿಆರ್:2:2005-06, ದಿನಾಂಕ: 30ನೇ ಆಗಸ್ಟ್ 05**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:243:ಸಿಎಲ್‌ಎಂ:91 ದಿ:4.5.94 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಟಿ.ಓ. ಸುನಂದಮ್ಮ ಆದ ನಾನು ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ., ಮೊಳಕಾಲ್ಮೂರು, ಮೊಳಕಾಲ್ಮೂರು ತಾಲ್ಲೂಕು ಇದನ್ನು ಪ್ರಸ್ತಾವನೆಯಲ್ಲಿ ನಮೂದಿಸಿರುವ ಷರತ್ತುಗಳಿಗೊಳಪಟ್ಟು ಉಲ್ಲೇಖ (1)ರನ್ವಯ ಹೊರಡಿಸಲಾಗಿದ್ದ ಈ ಕಛೇರಿಯ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಶ್ಚೇತನಗೊಳಿಸಿರುತ್ತೇನೆ. ಸಂಘದ ಆಡಳಿತ ಮಂಡಳಿಯವರು ಒಂದು ವರ್ಷದೊಳಗೆ ಪ್ರಸ್ತಾವೆಯಲ್ಲಿ ವಿಧಿಸಿರುವ ಷರತ್ತುಗಳನ್ವಯ ಸಂಘದ ವ್ಯವಹಾರಗಳನ್ನು ನಡೆಸಿ ಸಂಘವನ್ನು ಪುನಶ್ಚೇತನಗೊಳಿಸುವ ಬಗ್ಗೆ ಸೂಕ್ತ ಕ್ರಮವಿಡಲು ನಿರ್ದೇಶಿಸಿದೆ.

ಈ ಆದೇಶವನ್ನು ದಿನಾಂಕ: 30.8.2005 ರಂದು ನನ್ನ ಸ್ವಸಹಿ ಮತ್ತು ಕಚೇರಿಯ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

ಪಿ.ಆರ್. 1344 ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ.

## ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ನಡುವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಟಿ. ಮಲೇನೂರು ಹೊಳಲ್ಕೆರೆ ತಾಲ್ಲೂಕು ಇದರ ರದ್ಧತಿಯ ಬಗ್ಗೆ.

**ಉಲ್ಲೇಖ:**
1. ಸಹಕಾರ ಅಭಿವೃದ್ಧಿ ಅಧಿಕಾರಿ ಹೊಳಲ್ಕೆರೆ ಇವರ ಪ್ರಸ್ತಾವನೆ ಸಂಖ್ಯೆ:ಸನಿ:30:ಸಮಾಪನೆ:2005-06 ದಿನಾಂಕ: 26.8.2005.
2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ:ಡಿಆರ್‌ಡಿ:ಎಲ್‌ಪಿಡಿ:ಸಿಆರ್:173:96-97, ದಿನಾಂಕ:10.3.1998.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೋಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ಸಹಾಯಕನಿಬಂಧಕರು, ಚಿತ್ರದುರ್ಗ ಇವರು ಮೇಲ್ಕಂಡ ಉಲ್ಲೇಖ (1)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ.16463.58 ವಜಾ ಜಾತ ರೂ.-- ಮಾತ್ರ ಇದ್ದು ಹೂಕುಬಾಕಿಯಾಗಿರುವುದರಿಂದ ಅವರ ವಸೂಲಿಗೆ

ಹಾಗೂ ವಿಲೇವಾರಿಗೂ ಯಾವ ರಹ ಇಲ್ಲದ್ದರಿಂದ ಆಸ್ತಿ ಜವಾಬ್ದಾರಿ ಇಲ್ಲವೆಂದು ದೃಢಪಟ್ಟಿರುವುದರಿಂದ ಇದರ ನೋಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ ನಂ:ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:173:2005-06, ದಿನಾಂಕ: 30ನೇ ಆಗಸ್ಟ್ 2005**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀಮತಿ ಡಿ.ಓ. ಸುನಂದಮ್ಮ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಟಿ. ಮಲೇನೂರು ಹೊಳಲ್ಕೆರೆ ತಾಲ್ಲೂಕು ಇದರ ನೊಂದಣಿ ಸಂಖ್ಯೆ: ಎಆರ್‌ಸಿ 31/13988 ದಿನಾಂಕ:14.1.98 ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದೂ ಪರಿಗಣಿಸತಕ್ಕದ್ದು.

ನನ್ನ ಸ್ವ ಹಸ್ತ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ:30.8.05 ರಂದು ಆದೇಶ ನೀಡಲಾಗಿದೆ.

ಪಿ.ಆರ್. 1345 ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 62/2005-06, ದಿನಾಂಕ: 27ನೇ ಆಗಸ್ಟ್ 2005**

**ವಿಷಯ:** ವಿದ್ಯಾ ಭಾರತಿ ಎಜ್ಯುಕೇಷನ್ ಟ್ರಸ್ಟ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ ಹೋಬಳಿ, ನಗರೇಶ್ವರ ನಾಗೇನಹಳ್ಳಿ ಗ್ರಾಮದ ಸ.ನಂ. 6/2 ರಲ್ಲಿ 1-27 ಮತ್ತು 7/7 ರಲ್ಲಿ 1-01 ಒಟ್ಟು 2-28 ಎ/ಗುಂ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ವಿದ್ಯಾ ಭಾರತಿ ಎಜ್ಯುಕೇಷನ್ ಟ್ರಸ್ಟ್ ರವರು ಬೆಂಗಳೂರು ಪೂರ್ವ, ಕೆ.ಆರ್.ಪುರ ಹೋಬಳಿ, ನಗರೇಶ್ವರ ನಾಗೇನಹಳ್ಳಿ ಗ್ರಾಮದ ಸ.ನಂ. 6/2 ರಲ್ಲಿ 1-27 ಮತ್ತು 7/7 ರಲ್ಲಿ 1-01 ಒಟ್ಟು 2-28 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್:ಸಿಆರ್43/05-06 ದಿನಾಂಕ: 26.7.2005ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 6/2 ರಲ್ಲಿ 1-27 ಮತ್ತು 7/7 ರಲ್ಲಿ 1-01 ಒಟ್ಟು 2-28 ಎ/ಗುಂ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ, ಕೃಷ್ಣಾರಾಜಪುರ ಉಪ ನೊಂದಣಾ ಕಛೇರಿಯಲ್ಲಿ ದಿನಾಂಕ: 15.4.2004 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ ಹೋಬಳಿ, ನಗರೇಶ್ವರ ನಾಗೇನಹಳ್ಳಿ ಗ್ರಾಮದ ಸ.ನಂ. 6/2 ರಲ್ಲಿ 1-27 ಮತ್ತು 7/7 ರಲ್ಲಿ 1-01 ಒಟ್ಟು 2-28 ಎ/ಗುಂ ಜಮೀನನ್ನು ವಿದ್ಯಾ ಭಾರತಿ ಎಜ್ಯುಕೇಷನ್ ಟ್ರಸ್ಟ್, ನಗರೇಶ್ವರ ನಾಗೇನಹಳ್ಳಿ ಗ್ರಾಮ, ಕೆ. ನಾರಾಯಣಪುರ ಅಂಚೆ, ಕೆ.ಆರ್. ಪುರ ಹೋಬಳಿ, ಬೆಂಗಳೂರು-77 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1346 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಆಯುಕ್ತರ ಕಾರ್ಯಾಲಯ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

**ಆನಂದರಾವ್ ವೃತ್ತ, ಬೆಂಗಳೂರು-560 009**

**ಅಧಿಕೃತ ಜ್ಞಾಪನಾಪತ್ರ ಸಂಖ್ಯೆ: ಆಕುಕ/17/ಆಯುಕ್ತ/2005-06, ದಿನಾಂಕ: 28ನೇ ಜುಲೈ 2005**

**ವಿಷಯ:** ಇಲಾಖೆಯ ಜಿಲ್ಲೆಯ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪದವಿ ಹೊಂದಿರುವ ವೈದ್ಯರುಗಳನ್ನು ಗುತ್ತಿಗೆ ಆಧಾರದ ಮೇಲೆ ತಜ್ಞ ವೈದ್ಯರಾಗಿ ನೇಮಕಾತಿ ಬಗ್ಗೆ.

**ಉಲ್ಲೇಖ:** ದಿನಾಂಕ 27.7.2005ರಲ್ಲಿ ಸರ್ಕಾರದಿಂದ ಅನುಮೋದಿಸಲ್ಪಟ್ಟಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಜಿಲ್ಲೆಯ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪದವಿ ಹೊಂದಿರುವ ವೈದ್ಯರುಗಳನ್ನು ಗುತ್ತಿಗೆ ಆಧಾರದ ಮೇಲೆ ತಜ್ಞ ವೈದ್ಯರಾಗಿ ನೇಮಕಾತಿ ಮಾಡಲು ದಿನಾಂಕ: 18.5.2005 ರಂದು ನೇರ ಸಂದರ್ಶನ ನಡೆಸಲಾಗಿದ್ದು, ಈ ಕೆಳಕಾಣಿಸಿರುವ ವೈದ್ಯರುಗಳನ್ನು ಅವರ ತಜ್ಞತೆಗೆ ಅನುಗುಣವಾಗಿ ಮಾಹೆ ಸಂಚಿತ ವೇತನ ರೂ. 13,000/- ಕ್ಕೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಸರ್ಕಾರದ ನಿರ್ದೇಶನದ ಮೇರೆಗೆ ತಾತ್ಕಾಲಿಕವಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ ನೇಮಿಸಲಾಗಿದೆ.

ಅಲ್ಲದೇ ಗುತ್ತಿಗೆ ಆಧಾರದ ನೇಮಕಾತಿ ಮಾಡಿರುವ ಅಭ್ಯರ್ಥಿಗಳು ಆಜ್ಞಾ ಪತ್ರಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸಂಬಂಧಿಸಿದಂತೆ ಸ್ಪಷ್ಟಪಡಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧರಾಗುವ ಷರತ್ತಿಗೆ ಒಳಪಟ್ಟಿರುತ್ತದೆ.

**ಷರತ್ತು ಮತ್ತು ನಿಬಂಧನೆಗಳು**

1) ಗುತ್ತಿಗೆ ಆಧಾರದ ಮೇಲೆ ಮಾಡುವ ನೇಮಕಾತಿ 1 ವರ್ಷದ ಅವಧಿಗೆ ಮಾತ್ರ ಎಂದು ನಿಗದಿಪಡಿಸಿರುವುದನ್ನು ಒಪ್ಪಿಕೊಳ್ಳತಕ್ಕದ್ದು.
2) ಈ ಆಜ್ಞಾ ಪತ್ರ ತಲುಪಿದ 07 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ, ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
3) ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ತಜ್ಞ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಅಂಕಪಟ್ಟಿ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ / ಜಿಲ್ಲಾ ಶಸ್ತ್ರ ಚಿಕಿತ್ಸಕರುಗಳ ಮುಂದೆ ಹಾಜರುಪಡಿಸತಕ್ಕದ್ದು.
4) ವೃಂದ ಮತ್ತು ನೇಮಕಾತಿ ನಿಯಮಗಳ ರೀತ್ಯ ನಿಗದಿತ ವಯೋಮಿತಿಯಲ್ಲಿರತಕ್ಕದ್ದು.
5) ಆಯಾ ಪ್ರವರ್ಗಗಳಲ್ಲಿ ಮೀಸಲಾತಿ ಪಡೆಯಲು ಅಭ್ಯರ್ಥಿಗಳು ತಮ್ಮ ಜಾತಿ / ಜಾತಿ ಮತ್ತು ಆದಾಯ ಪ್ರಮಾಣಪತ್ರಗಳನ್ನು ಸಲ್ಲಿಸತಕ್ಕದ್ದು (ಸಾಮಾನ್ಯ ವರ್ಗ ಅಭ್ಯರ್ಥಿಗಳು ಹೊರತುಪಡಿಸಿ)
6) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು / ಜಿಲ್ಲಾ ಶಸ್ತ್ರಚಿಕಿತ್ಸಕರು ಹಾಗೂ ಆರೋಗ್ಯ ಮತ್ತು ಕುಟುಂಬ ಸೇವೆಗಳ ನಿರ್ದೇಶನಾಲಯವು ಕಾಲಕಾಲಕ್ಕೆ ಅವರುಗಳಿಗೆ ವಹಿಸಿದ ಕರ್ತವ್ಯ ಜವಾಬ್ದಾರಿಗಳನ್ನು ತಪ್ಪದೇ ನಿರ್ವಹಿಸತಕ್ಕದ್ದು.
7) ಅಭ್ಯರ್ಥಿಗಳು ಕೇಂದ್ರಸ್ಥಾನಗಳಲ್ಲಿ ತಂಗಿದ್ದು, 24 ಘಂಟೆಗಳಲ್ಲೂ ಯಾವುದೇ ತುರ್ತು ಸೇವೆಗೆ/ರಾತ್ರಿ ಪಾಳಿಗೆ / ತುರ್ತು ವಿಭಾಗಗಳಲ್ಲಿ ಲಭ್ಯವಿರತಕ್ಕದ್ದು.
8) ತೃಪ್ತಿಕರವಾದ ಕರ್ತವ್ಯ ನಿರ್ವಹಣೆ ಷರತ್ತಿಗೆ ಒಳಪಟ್ಟು ಪ್ರತಿ ತಿಂಗಳಿಗೆ ರೂ. 13,000/- ಸಂಚಿತ ಮೊತ್ತವನ್ನು ಮಾತ್ರ ನೀಡಲಾಗುತ್ತದೆ.
9) ಗುತ್ತಿಗೆ ಆಧಾರದ ನೇಮಕಾತಿಯನ್ನು ಯಾವುದೇ ಸಮಯದಲ್ಲಿ, ಯಾವುದೇ ಕಾರಣವಿಲ್ಲದೆ ಅಥವಾ ಸರ್ಕಾರ ಉಭಯ ಪಕ್ಷಗಳು ಒಂದು ತಿಂಗಳ ನೋಟೀಸು ಕೊಟ್ಟು ಅಥವಾ ನೋಟೀಸಿನ ಬದಲಾಗಿ ರೂ. 13,000/- ಮೊತ್ತವನ್ನು ನೀಡಿ ಪರ್ಯಾವಸನಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.
10) ತಾತ್ಕಾಲಿಕ ಸರ್ಕಾರಿ ನೌಕರನಿಗೆ ಸಿಗುವಂತಹ ಎಲ್ಲಾ ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಒಪ್ಪಿಕೊಳ್ಳತಕ್ಕದ್ದು.
11) ದುರ್ನಡತೆಯಿಂದಾಗಿ ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಅದನ್ನು ಸರ್ಕಾರಕ್ಕೆ ತುಂಬಿಕೊಡುವ ಷರತ್ತಿಗೆ ಬದ್ಧರಾಗತಕ್ಕದ್ದು.
12) ಖಾಯಂ ನೇಮಕಾತಿಗಾಗಲೀ, ವಿಶ್ರಾಂತಿ ವೇತನಕ್ಕಾಗಲೀ, ನಿವೃತ್ತಿ ಉಪದಾನಕ್ಕಾಗಲೀ, ವೇತನ ಶ್ರೇಣಿಗಾಗಲೀ ಅಥವಾ ಯಾವುದೇ ಭತ್ಯೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುವುದಿಲ್ಲವೆಂಬ ಷರತ್ತಿಗೆ ಬದ್ಧರಾಗತಕ್ಕದ್ದು.
13) ಮೇಲಿನ ಷರತ್ತುಗಳ ಘೋಷಣಾಪತ್ರವನ್ನು ಸಂಸ್ಥೆಯ ಮುಖ್ಯಸ್ಥರಿಗೆ ಸಲ್ಲಿಸತಕ್ಕದ್ದು.

| Sl. No. | Name and Address | Specialty | Place of Posting |
|---|---|---|---|
| ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವಂತೆ | | | |

**ಆಯುಕ್ತರು**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧರಾಗುವ ಘೋಷಣಾ ಪ್ರಮಾಣ ಪತ್ರ**

1) ಗುತ್ತಿಗೆ ಆಧಾರದ ಮೇಲೆ ಮಾಡುವ ನೇಮಕಾತಿ 1 ವರ್ಷದ ಅವಧಿಗೆ ಮಾತ್ರ ಎಂದು ನಿಗದಿಪಡಿಸಿರುವುದನ್ನು ನಾನು ತಿಳಿದು ಒಪ್ಪಿಕೊಂಡಿರುತ್ತೇನೆ.
2) ವೃಂದ ಮತ್ತು ನೇಮಕಾತಿ ನಿಯಮಗಳ ರೀತ್ಯ ನಿಗದಿತ ವಯೋಮಿತಿಯಲ್ಲಿರುತ್ತೇನೆ.
3) ನಾನು---------------------ಜಾತಿ----------------ಪ್ರವರ್ಗ ಮೀಸಲಾತಿಗೆ ಸಂಬಂಧಿಸಿದಂತೆ ಜಾತಿ / ಜಾತಿ ಮತ್ತು ಆದಾಯ ಪ್ರಮಾಣಪತ್ರಗಳನ್ನು ಸಲ್ಲಿಸಿರುತ್ತೇನೆ.
4) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು / ಜಿಲ್ಲಾ ಶಸ್ತ್ರಚಿಕಿತ್ಸಕರು ಹಾಗೂ ಆರೋಗ್ಯ ಮತ್ತು ಕುಟುಂಬ ಸೇವೆಗಳ ನಿರ್ದೇಶನಾಲಯವು ಕಾಲಕಾಲಕ್ಕೆ ಅವರುಗಳಿಗೆ ವಹಿಸಿದ ಕರ್ತವ್ಯ ಜವಾಬ್ದಾರಿಗಳನ್ನು ತಪ್ಪದೇ ನಿರ್ವಹಿಸಲು ಒಪ್ಪಿಕೊಂಡಿರುತ್ತೇನೆ.
5) ನಾನು ಕೇಂದ್ರಸ್ಥಾನಗಳಲ್ಲಿ ತಂಗಿದ್ದು, 24 ಘಂಟೆಗಳಲ್ಲೂ ಯಾವುದೇ ತುರ್ತು ಸೇವೆಗೆ/ ರಾತ್ರಿ ಪಾಳಿಗೆ / ತುರ್ತು ವಿಭಾಗಗಳಲ್ಲಿ ಲಭ್ಯವಿದ್ದು, ಸೇವೆ ಸಲ್ಲಿಸುವ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ.

6) ತೃಪ್ತಿಕರವಾದ ಕರ್ತವ್ಯ ನಿರ್ವಹಣೆ ಷರತ್ತಿಗೆ ಒಳಪಟ್ಟು ಪ್ರತಿ ತಿಂಗಳಿಗೆ ರೂ. 13,000/- ಸಂಚಿತ ಮೊತ್ತವನ್ನು ಮಾತ್ರ ಪಡೆಯಲು ಒಪ್ಪಿಕೊಂಡಿರುತ್ತೇನೆ.

7) ಗುತ್ತಿಗೆ ಆಧಾರದ ನೇಮಕಾತಿಯನ್ನು ಯಾವುದೇ ಸಮಯದಲ್ಲಿ, ಯಾವುದೇ ಕಾರಣವಿಲ್ಲದೆ ಅಥವಾ ಸರ್ಕಾರ ಉಭಯ ಪಕ್ಷಗಳು ಒಂದು ತಿಂಗಳ ನೋಟೀಸು ಕೊಟ್ಟು ಅಥವಾ ನೋಟೀಸಿನ ಬದಲಾಗಿ ರೂ. 13,000/- ಮೊತ್ತವನ್ನು ನೀಡಿ ಪರ್ಯಾವಸನಗೊಳಿಸುವ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ.

8) ತಾತ್ಕಾಲಿಕ ಸರ್ಕಾರಿ ನೌಕರನಿಗೆ ಸಿಗುವಂತಹ ಎಲ್ಲಾ ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಒಪ್ಪಿಕೊಂಡಿರುತ್ತೇನೆ.

9) ದುರ್ನಡತೆಯಿಂದಾಗಿ ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಅದನ್ನು ಸರ್ಕಾರಕ್ಕೆ ತುಂಬಿಕೊಡುವ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ.

10) ಖಾಯಂ ನೇಮಕಾತಿಗಾಗಲೀ, ವಿಶ್ರಾಂತಿ ವೇತನಕ್ಕಾಗಲೀ, ನಿವೃತ್ತಿ ಉಪದಾನಕ್ಕಾಗಲೀ, ವೇತನ ಶ್ರೇಣಿಗಾಗಲೀ ಅಥವಾ ಯಾವುದೇ ಭತ್ಯೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುವುದಿಲ್ಲವೆಂಬ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ.

ಸ್ಥಳ:

ದಿನಾಂಕ: (ಅಭ್ಯರ್ಥಿ ಸಹಿ)

**ANNEXURE**

**SPECIALISTS (ON CONTRACT BASIS) WII-18-05-2005**

| Sl. No. | Name and Address | Dlp. / PG Qual. | Posting |
|---|---|---|---|
| 1 | NAVEEN PRASANNA<br>A-4, UAS Staff Quarters, Hebbal,<br>Bangalore-24 | DNB (OBG) | GH, MULBAGAL, KOLAR |
| 2 | LAKSHMI S RAO<br>No. 833/N, 9th Main 5th Cross,<br>RPC Layout, Vijayanagar, 2nd Stage,<br>Bangalore-40 | DGO,DNB, MNANS | GH, CHIKKANAYAKANAHALLI, TUMKUR |
| 3 | MANJULA C<br>Behind Shanti Service Station Gundamma Camp, Gangawathi-583 227 | DGO | GH, KUSTAGI, KOPPAL |
| 4 | SHYLAJA RANI H.C.<br>#88, Telecom Layout, Near Speech and Hearing, Mysore-9 | DCP | DH, CHITRADURGA |
| 5 | ARUNKUMAR HUDDAR<br>C/o V.K. Patil Advocate, Near Old Degree College, M.U.S.S. Road, Humnabad Bidar. | DCH | GH, SHORAPUR, GULBARGA |
| 6 | NAGANATH S. HEBLE,<br>C/o V.S. HEBLE, Plot No. 13, Tilaknagar,<br>Kusnoor Road, Gulbarga-585 105 | DLO | DH, RAICHUR |
| 7 | SUDHAKANTH B.K.<br>No. 20, 5th Main Road, Jayamahal,<br>Bangalore-560 046. | DORTHO | DH., KOPPAL |
| 8 | ARUN KUMAR G.<br>Near Port Bungalow Road, Gangulli,<br>Kundapur Tq, Udupi Dist - 576 216 | DORTHO | WENLOCK HOSPITAL, MANGALORE |
| 9 | ANIL KUMAR R.<br>Door No. 1124, Thopinakola Piriyapatna,<br>Mysore Dist. | DVD | WENLOCK HOSPITAL, MANGALORE |
| 10 | SHANTHALA T.<br>No. 329, 7th 'A' Main, 4'T' Block,<br>Koramangala, Bangalore-34 | MSOBG | DISTRICT HOSPITAL, MADIKERI |
| 11 | RAJENDRA PRASAD H.M.<br>No. 11, Lavanya, 27th Cross, S.I.T. Extension, Tumkur | DCP | DISTRICT HOSPITAL, DHARWAR |
| 12 | MANJU S<br>No. 329, 7th 'A' Main, 4th Block,<br>Koramangala, Bangalore-34 | DCH | K.N.T.B. HOSPITAL, KOLAR |

Commissioner

P.R. 1273

Health and Family Welfare Services

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ ಸಾಗರ

**ಅಧಿಸೂಚನೆ ಸಂ:ಬಿ3:ಅಮೊ.ವಾಹನ.09/05-06, ದಿನಾಂಕ: ಆಗಸ್ಟ್ 2005**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 407-ಮಿನಿಲಾರಿ ಕೆಎ-31-1286 | ವಲಯ ಅರಣ್ಯಾಧಿಕಾರಿ, ಚೋರಡಿ ಇವರ ಅಮೊ ಸಂ:36/05-06 ದಿ:19.7.05 | MUQ 806487 | MUQ 838404 |
| 2 | ಆಟೋರಿಕ್ಷಾ ಕೆಎ-15-3429 | ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರ ಅಮೊ ಸಂ:69/05-06. ದಿ:3.8.05 | SB 49020 | SB 63773 |
| 3 | ಮಹೇಂದ್ರಪಿಕ್ ಅಪ್ ಕೆಎ-15-3227 | ವಲಯ ಅರಣ್ಯಾಧಿಕಾರಿ, ನಗರ ಇವರ ಅಮೊ ಸಂ:57/05-06. ದಿ: 6.8.05 | 28972 | 37730 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 1277 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

## ಆಡಳಿತಾಧಿಕಾರಿಗಳು, ಕೃಷ್ಣಾ ಕಾಡಾ, ಭೀಮರಾಯನಗುಡಿ, ತಾಲ್ಲೂಕು ಶಹಾಪೂರ, ಜಿಲ್ಲೆ ಗುಲ್ಬರ್ಗಾ ಇವರ ನಡವಳಿಗಳು

**ವಿಷಯ:** ಶ್ರೀ ರವೀಂದ್ರ ಮಾಳಗಿ, ಕೃಷಿ ಸಹಾಯಕ ಇವರು ದಿನಾಂಕ 2.11.1999 ರಿಂದ ಕಾರ್ಯಾಲಯದ ಕೆಲಸಕ್ಕೆ ಅನಧಿಕೃತ ಗೈರು ಹಾಜರಿ ಇರುವುದರಿಂದ ಸೇವೆಯಿಂದ ತೆಗೆದುಹಾಕುವ ಕುರಿತು.

**ಉಲ್ಲೇಖ:**
1. ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಉಪ ವಿಭಾಗ ಸಂ:1, ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರ ಕಾರಣ ಕೇಳುವ ನೋಟೀಸ್ ಸಂ:ಸಕೃನಿ:ಕೃಉವಿ-1:ಸಿಬ್ಬಂದಿ:2000-01:639 ದಿನಾಂಕ 2.2.2001.
2. ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರ ಪತ್ರ ಸಂ:ಸಿಬ್ಬಂದಿ:ಅ.ಗೈ: 2002-03:712 ದಿನಾಂಕ: 31.8.2002 ಮತ್ತು ದಿನಾಂಕ: 16/20.10.2003.
3. ಈ ಕಾರ್ಯಾಲಯದ ಪತ್ರ ಸಂ:ಕಾಡಾ:ಸಿ-2:75:2002-03:9175 ದಿನಾಂಕ: 1.12.2003.
4. ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರ ಪತ್ರ ಸಂ:ಭೂಅಅ (ಕೃ): ವಿಚಾರಣೆ:2003-04:1196 ದಿನಾಂಕ:11.2.2004.
5. ಈ ಕಾರ್ಯಾಲಯದ ಪತ್ರ ಸಂ:ಕಾಡಾ:ಸಿ-2:75:02-03:12592 ದಿನಾಂಕ: 4.3.2004.
6. ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರ ಪತ್ರ ಸಂ:ಭೂಅಅ (ಕೃ): ಸಿಬ್ಬಂದಿ:03-04:411 ದಿನಾಂಕ:27/28.8.2004.
7. ಈ ಕಾರ್ಯಾಲಯದ ಆದೇಶ ಸಂ:ಕಾಡಾ:ಸಿ-2:75:02-03:6015 ದಿನಾಂಕ 16.10.2004.
8. ಉಪ ಕೃಷಿ ನಿರ್ದೇಶಕರು, (ಕೃಷಿ ವಿಭಾಗ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರ ಪತ್ರ ಸಂ:ಉಕೃನಿ:ಸಿ-1:6: 92-93:185 ದಿನಾಂಕ: 24.5.2005.
9. ಈ ಕಾರ್ಯಾಲಯದ ದ್ವಿತೀಯ ಕಾರಣ ಕೇಳುವ ನೋಟೀಸ್ ಸಂ:1594 ದಿನಾಂಕ 1.6.2005.
10. ಶ್ರೀ ರವೀಂದ್ರ ಮಾಳಗಿ, ಕೃಷಿ ಸಹಾಯಕ ಇವರು ದಿನಾಂಕ:20.6.2005ರ ಪತ್ರಗಳ ಮೂಲಕ ಸಲ್ಲಿಸಿರುವ ವಿವರಣೆಗಳು ಮತ್ತು ಮನವಿ.

**ಪ್ರಸ್ತಾವನೆ:**

ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಉಪ ವಿಭಾಗ ಸಂ:1, ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರು, ಅವರ ಕಾರ್ಯಾಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಶ್ರೀ ರವೀಂದ್ರ ಮಾಳಗಿ, ಕೃಷಿ ಸಹಾಯಕ ಇವರು ದಿನಾಂಕ: 2.11.1999 ರಿಂದ ಕಾರ್ಯಾಲಯದ ಕೆಲಸಗಳಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದಕ್ಕೆ ಸದರಿ ಸಿಬ್ಬಂದಿಯವರಿಗೆ ದಿನಾಂಕ 29.12.1999ರ ಜ್ಞಾಪನಾ ಪತ್ರ ದಿನಾಂಕ 18.8.2000ರ ಕಾರಣ ಕೇಳುವ ನೋಟೀಸು ಮತ್ತು ಉಲ್ಲೇಖ-1ರಲ್ಲಿ ತೋರಿಸಿರುವ ದಿನಾಂಕ 2.2.2001ರ ಅಂತಿಮ ಕಾರಣ ಕೇಳುವ ನೋಟೀಸುಗಳನ್ನು ಜಾರಿ ಮಾಡಿ, ಕೆಲಸಕ್ಕೆ ಹಾಜರಾಗಲು ಅವಕಾಶ ನೀಡಿದಾಗ್ಯೂ ಕೂಡ ಸದರಿ ಸಿಬ್ಬಂದಿಯವರು ಕೆಲಸಕ್ಕೆ ಹಾಜರಾಗದೇ ಇರುವ ಕುರಿತು ಮೇಲಾಧಿಕಾರಿಗಳಿಗೆ ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಉಪ ವಿಭಾಗ ಸಂ:1 ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರು ವರದಿ ಸಲ್ಲಿಸಿರುತ್ತಾರೆ. ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರು ವರದಿಯನ್ನು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ಮೇರೆಗೆ ಶಿಸ್ತು ಕ್ರಮ ಕೈಗೊಳ್ಳಲು ದಾಖಲೆಗಳೊಂದಿಗೆ ಉಲ್ಲೇಖ-2ರಲ್ಲಿ ತೋರಿಸಿರುವಂತೆ ಪ್ರಸ್ತಾವನೆಯನ್ನು ಈ ಕಾರ್ಯಾಲಯಕ್ಕೆ ಸಲ್ಲಿಸಿರುತ್ತಾರೆ. ಉಲ್ಲೇಖ-3ರ ಈ ಕಾರ್ಯಾಲಯದ ಪತ್ರದನ್ವಯ, ಸದರಿ ನೌಕರರಿಗೆ ಆಪಾದನಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸು ಜಾರಿ

ಮಾಡಿ, 15 ದಿನದೊಳಗಾಗಿ ಆರೋಪಗಳ ಬಗ್ಗೆ "ರಕ್ಷಣಾತ್ಮಕ ಹೇಳಿಕೆಯನ್ನು" ಲಿಖಿತದಲ್ಲಿ ಕಾರ್ಯಾಲಯದ ಮೂಲಕವಾಗಲಿ ಅಥವಾ ನೇರವಾಗಿ ಆಗಲಿ ಈ ಕಾರ್ಯಾಲಯಕ್ಕೆ ಸಲ್ಲಿಸಲು ಸೂಚಿಸಿ, ಮೌಖಿಕವಾಗಿ ಹೇಳಿಕೆಯನ್ನು ತಿಳಿಸಲು ನೌಕರರಿಗೆ ಅವಕಾಶ ನೀಡಲಾಗಿರುವುದು. ಉಲ್ಲೇಖ-4ರನ್ವಯ ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರು, ಶ್ರೀ ರವೀಂದ್ರ ಮಾಳಗಿ, ಕೃಷಿ ಸಹಾಯಕ ಇವರಿಗೆ ಆರೋಪ ಪಟ್ಟಿ ಜಾರಿ ಮಾಡಲು ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಉಪ ವಿಭಾಗ ಸಂ:1, ಕೃಷ್ಣಾ ಕಾಡಾ, ಭೀಮರಾಯನಗುಡಿ ಕಾರ್ಯಾಲಯದ ಸಿಬ್ಬಂದಿಯನ್ನು ಮೂರು ಬಾರಿ ನಿಯೋಜಿಸಿದ್ದರೂ ಸಹ ಸದರಿಯವರು ಅವರ ಸ್ವಗ್ರಾಮದಲ್ಲಿ ಇಲ್ಲದೇ ಇರುವುದರಿಂದ ಅವರ ತಂದೆಯವರಿಗೆ ತಲುಪಿಸಲಾಗಿದೆ. ಹಾಗೂ ಅವರ ತಂದೆಯವರು ಅವರ ಮಗನಿಗೆ ದಿನಾಂಕ: 22.1.2004 ರಂದು ತಲುಪಿಸಿರುವ ಬಗ್ಗೆ ಲಿಖಿತ ರೂಪದಲ್ಲಿ ದಾಖಲೆ ಒಪ್ಪಿಸಿರುತ್ತಾರೆ. ಆದರೂ ಕೂಡಾ ಸದರಿ ನೌಕರರು ಕೆಲಸಕ್ಕೆ ಹಾಜರಾಗದೇ ಮತ್ತು ಆರೋಪಗಳಿಗೆ ಸ್ಪಂದಿಸದೇ ಇದ್ದಕಾರಣ, ಉಲ್ಲೇಖ-5ರ ಈ ಕಾರ್ಯಾಲಯದ ಪತ್ರದ ಮೂಲಕ ದಿನಾಂಕ 2.11.1999 ರಿಂದ ಕಾರ್ಯಾಲಯದ ಕೆಲಸಕ್ಕೆ ಅನಧಿಕೃತ ಗೈರು ಹಾಜರು ಇರುವ ಬಗ್ಗೆ ಅವರ ಸ್ವಗ್ರಾಮ ಬೆಳಗಾಂವ ಜಿಲ್ಲೆ ವ್ಯಾಪ್ತಿಗೊಳಪಡುವ ಅತ್ಯಧಿಕ ಪ್ರಸಾರವುಳ್ಳ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲು ಅನುಮತಿ ನೀಡಲಾಗಿದೆ. ಇದರನ್ವಯ, ದಿನಾಂಕ 24.3.2004 ರಂದು ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ, ಪ್ರತಿವಾದದ ಲಿಖಿತ ಹೇಳಿಕೆಯನ್ನು 15 ದಿನಗಳಲ್ಲಿ ಸಲ್ಲಿಸಲು ಮತ್ತು ಕೆಲಸಕ್ಕೆ ಹಾಜರಾಗಲು ಅಂತಿಮವಾಗಿ ಅವಕಾಶ ಸಹ ನೀಡಿ, ಹೇಳಿಕೆ ಸಲ್ಲಿಸದೇ ಇದ್ದಲ್ಲಿ ಪ್ರತಿಪಾದಿಸುವಂತಹ ವಿಷಯಗಳು ಏನೂ ಇಲ್ಲವೆಂದು ಮತ್ತು ಅನಧಿಕೃತ ಗೈರು ಹಾಜರಿಯನ್ನು ಒಪ್ಪಿಕೊಂಡಿರುವುದಾಗಿ, ಮತ್ತು ಸರಕಾರದ ಕೆಲಸದಲ್ಲಿ ಆಸಕ್ತಿ ಇಲ್ಲವೆಂದು ಭಾವಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ರೀತ್ಯಾ ಏಕಪಕ್ಷೀಯವಾಗಿ ದಿನಾಂಕ 2.11.1999 ರಿಂದ ಕೆಲಸದಿಂದ ತೆಗೆದುಹಾಕುವ ಕುರಿತು ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿದೆ. ಪ್ರಕಟಣೆ ಹೊರಡಿಸಿ 4 ತಿಂಗಳ ಅವಧಿ ಗತಿಸಿದರೂ ಸಹ ಯಾವ ತರಹದ ಲಿಖಿತ ಹೇಳಿಕೆ ಸ್ವೀಕೃತವಾಗಿರುವುದಿಲ್ಲವೆಂದು ಉಲ್ಲೇಖ-6ರ ಮೂಲಕ ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರು, ಈ ಕಾರ್ಯಾಲಯಕ್ಕೆ ವರದಿ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಶ್ರೀ ರವೀಂದ್ರ ಮಾಳಗಿ, ಕೃಷಿ ಸಹಾಯಕ ಇವರ ವಿರುದ್ದ ಅನಧಿಕೃತ ಗೈರು ಹಾಜರಿ ಬಗ್ಗೆ ಕರ್ನಾಟಕ ನಾಗರೀಕ ಸೇವಾ ನಿಯಮ-108ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು, ಉಲ್ಲೇಖ-7ರ ಈ ಕಾರ್ಯಾಲಯದ ಆದೇಶದನ್ವಯ, ಶ್ರೀ ಎನ್.ಎ. ಪಟವೇಗಾರ, ಮುಖ್ಯ ಲೆಕ್ಕಾಧಿಕಾರಿಗಳು, ಮತ್ತು ಪ್ರಭಾರ ಉಪ ಕೃಷಿ ನಿರ್ದೇಶಕರು, ಕೃಷಿ ವಿಭಾಗ, ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮತ್ತು ಶ್ರೀ ಶಂಕ್ರಪ್ಪ, ಅಧೀಕ್ಷಕರು, ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ), ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರನ್ನು ಮಂಡನಾಧಿಕಾರಿಗಳಾಗಿ ನೇಮಿಸಲಾಗಿತ್ತು. ಉಲ್ಲೇಖ-8ರ ಮೂಲಕ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಮುಗಿಸಿ, ಸದರಿ ನೌಕರರು ಎಲ್ಲಾ ನೋಟೀಸ್‌ಗಳನ್ನು ಸ್ವೀಕರಿಸಿ ವಿಚಾರಣೆಗೆ ಹಾಜರಾಗದೇ ಇರುವುದು ಮತ್ತು ನೌಕರರು ಸರಕಾರದ ಕೆಲಸದಲ್ಲಿ ಹೊಂದಿರುವ ನಿರ್ಲಕ್ಷ್ಯತೆಯು ಸ್ಪಷ್ಟವಾಗಿದ್ದು, ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲದೇ ಇರುವುದು ಮತ್ತು ದಿನಾಂಕ 2.11.1999 ರಿಂದ ಅನಧಿಕೃತ ಗೈರು ಹಾಜರಾಗಿ 5 ವರ್ಷಗಳು ಕಳೆದರೂ ಯಾವುದೇ ನೋಟೀಸು ಜಾಹೀರಾತುಗಳಿಗೆ ಸ್ಪಂದಿಸದೇ, ವಿವರಣೆ ನೀಡದೇ ಮತ್ತು ವಿಚಾರಣೆಗೆ ಹಾಜರಾಗದೇ ಇರುವುದರಿಂದ ಅನಧಿಕೃತ ಗೈರು ಹಾಜರು ಸಾಬೀತಾಗಿರುವುದಾಗಿ ಮತ್ತು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3ರ, ಸ್ಪಷ್ಟ ಉಲ್ಲಂಘನೆಯಾಗಿರುವುದರಿಂದ, ಸರ್ಕಾರದ ಸುತ್ತೋಲೆ ಸಂ:ಸಿಆಸುಇ:18:ಸೇಇವಿ:01 ದಿನಾಂಕ: 14.9.2001 ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮ-108ರ ಪ್ರಕಾರ ಕ್ರಮ ಕೈಕೊಳ್ಳಲು ಶಿಫಾರಸ್ಸು ಮಾಡಿ ವಿಚಾರಣಾ ವರದಿ ಸಲ್ಲಿಸಿರುತ್ತಾರೆ.

ಉಲ್ಲೇಖ-9ರ ಈ ಕಾರ್ಯಾಲಯದ ದ್ವಿತೀಯ ಕಾರಣ ಕೇಳುವ ನೋಟೀಸಿನ ಮೂಲಕ ವಿಚಾರಣಾ ವರದಿಯನ್ನು ಸದರಿ ಸಿಬ್ಬಂದಿಯವರಿಗೆ ಜಾರಿ ಮಾಡಿ, ಈ ನೋಟೀಸ್ ತಲುಪಿದ ಎರಡು ವಾರದ ಅವಧಿ ಒಳಗೆ ಈ ಕಾರ್ಯಾಲಯಕ್ಕೆ ವಿವರಣೆ ಸಲ್ಲಿಸಲು ಸೂಚಿಸಲಾಗಿದೆ. ನಿಗದಿತ ಅವಧಿಯಲ್ಲಿ ಹೇಳಿಕೆ ಸ್ವೀಕೃತವಾಗದಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರನ್ವಯ ಮುಂದಿನ ಅಗತ್ಯ ಕ್ರಮಗಳನ್ನು ಜರುಗಿಸಲಾಗುವುದೆಂದು ಸಹ ತಿಳಿಸಲಾಗಿತ್ತು. ಇದಕ್ಕೆ ಸದರಿ ನೌಕರರು ದಿನಾಂಕ: 20.6.2005 ರಂದು ನೋಟೀಸಿಗೆ ವಿವರಣೆಗಳನ್ನು ಸಲ್ಲಿಸುತ್ತಾ, ಕೌಟುಂಬಿಕ ಮತ್ತು ವೈದ್ಯಕೀಯ ಕಾರಣಗಳಿಗಾಗಿ ಅನಧಿಕೃತ ಗೈರು ಹಾಜರಾತಿ ಇರುವುದನ್ನು ಮನ್ನಿಸಿ, ತಮ್ಮನ್ನು ಕೆಲಸಕ್ಕೆ ಹಾಜರುಪಡಿಸಿಕೊಳ್ಳಲು ಕೋರಿರುತ್ತಾರೆ. ನೌಕರರು ಗೈರು ಹಾಜರಾಗಿರುವ ಅವಧಿಗೆ ನೀಡಿರುವ ಕಾರಣಗಳು ಸಮರ್ಥನೀಯವಾಗಿರುವುದಿಲ್ಲ. ಈ ಹಿಂದೆ ಕೂಡಾ ಸದರಿ ನೌಕರರು ಕಾರ್ಯಾಲಯದ ಕೆಲಸಗಳಿಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಈ ಕಾರ್ಯಾಲಯದ ಆದೇಶ ಸಂ:ಕಾಡಾ:ಸಿ-1: 219:93-94:4132 ದಿನಾಂಕ: 3.7.1997ರನ್ವಯ ದಂಡನೆ ವಿಧಿಸಿ, ಕೆಲಸಕ್ಕೆ ಹಾಜರಾತಿ ಮಾಡಿಕೊಳ್ಳಲಾಗಿತ್ತು. ಆದರೂ ಸಹ ದಿನಾಂಕ 2.11.1999 ರಿಂದ ಪುನಃ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ಸರ್ಕಾರದ ಕೆಲಸದಲ್ಲಿ ಆಸಕ್ತಿ ಇಲ್ಲವೆಂದು ವಿಚಾರಣೆ ಮತ್ತು ದಾಖಲೆಗಳಿಂದ ಸಾಬೀತಾಗಿರುತ್ತದೆ. ಹಾಗೂ ಈ ಎಲ್ಲಾ ವಾಸ್ತವಾಂಶಗಳ ಹಿನ್ನೆಲೆಯಿಂದಾಗಿ ಸದರಿ ನೌಕರರು ವಾಸ್ತವವಾಗಿ ಸೇವೆಯನ್ನು ಪರಿತ್ಯಜಿಸಿದಂತಾಗಿದೆ. ಆದ್ದರಿಂದ, ಸದರಿಯವರ ಮನವಿ ತಿರಸ್ಕರಿಸಲಾಗಿದೆ. ಕಾರಣ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ವಯ ಕರ್ನಾಟಕ ನಾಗರೀಕ ಸೇವಾ ನಿಯಮ-108ರ ಪ್ರಕಾರ ಮತ್ತು ಸರ್ಕಾರದ ದಿನಾಂಕ: 14.9.2001ರ ಸುತ್ತೋಲೆ ಹಾಗೂ ಕಾಡಾ ವೃಂದ ಮತ್ತು ನೇಮಕಾತಿ ನಿಯಮಗಳು, 1987ರ ನಿಯಮ-28ರ ಮೇರೆಗೆ ಸೇವೆಯಿಂದ ತೆಗೆದುಹಾಕಲು ತೀರ್ಮಾನಿಸಲಾಗಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಆದೇಶ ಸಂ:ಕಾಡಾ:ಸಿ-2:75:2002-03: 5082, ದಿನಾಂಕ: 29ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಈ ಪ್ರಾಧಿಕಾರದ ನೌಕರರಾದ ಶ್ರೀ ರವೀಂದ್ರ ಮಾಳಗಿ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಉಪ ವಿಭಾಗ ಸಂ:1, ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರು ದಿನಾಂಕ: 2.11.1999 ರಿಂದ ಕಾರ್ಯಾಲಯದ ಕೆಲಸಗಳಿಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಮತ್ತು ವಿಚಾರಣೆಯಲ್ಲಿ ಅನಧಿಕೃತ ಗೈರು ಹಾಜರಿ ಸಾಬೀತಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮ-108ರನ್ವಯ, ಶ್ರೀ ರವೀಂದ್ರ ಮಾಳಗಿ, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಉಪ ವಿಭಾಗ ಸಂ:1, ಕೃಷ್ಣಾ ಕಾಡಾ, ಭೀಮರಾಯನಗುಡಿ ಇವರನ್ನು ಅನಧಿಕೃತ ಗೈರು ಹಾಜರಾದ ದಿನಾಂಕದಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರದ (ಕೃಷ್ಣಾ ಕಾಡಾ ಪ್ರಾಧಿಕಾರದ) ಸೇವೆಯಿಂದ ತೆಗೆದುಹಾಕುವ ದಂಡನೆ ವಿಧಿಸಿ ಆದೇಶಿಸಲಾಗಿದೆ.

**ಎ.ಪಿ. ಜೋಷಿ**

ಪಿ.ಆರ್. 1278 ಆಡಳಿತಾಧಿಕಾರಿಗಳು, ಮತ್ತು ಶಿಸ್ತು ಪ್ರಾಧಿಕಾರಿಗಳು ಕೃಷ್ಣಾ ಕಾಡಾ, ಭೀಮರಾಯನಗುಡಿ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ:** ಸ್ಥಗಿತಗೊಂಡಿರುವ ಶುಭೋದಯ ಕ್ರೆಡಿಟ್ ಕೋ ಅಪರೇಟಿವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ದಿನಾಂಕ 28.7.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, / ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಆಡಳಿತ ಮಂಡಳಿ ಸದಸ್ಯರ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಣೆ ನೀಡಿದ್ದು ಈ ಬಗ್ಗೆ ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ ನಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-02/2005-06, ದಿನಾಂಕ: 24ನೇ ಆಗಸ್ಟ್ 2005

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶುಭೋದಯ ಕ್ರೆಡಿಟ್ ಕೋ ಅಪರೇಟಿವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ-ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 24.8.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1279 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ:** ಸ್ಥಗಿತಗೊಂಡಿರುವ ಬಾಪೂಜಿ ವಿದ್ಯಾ ಸಂಸ್ಥೆಗಳ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ದಿನಾಂಕ 14.2.2005 ಮತ್ತು 28.7.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, / ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಆಡಳಿತ ಮಂಡಳಿ ಸದಸ್ಯರ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಣೆ ನೀಡಿದ್ದು ಈ ಬಗ್ಗೆ ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ ನಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-04/2005-06, ದಿನಾಂಕ: 24ನೇ ಆಗಸ್ಟ್ 2005

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಬಾಪೂಜಿ ವಿದ್ಯಾ ಸಂಸ್ಥೆಗಳ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ-ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 24.8.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1280 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ:** ಸ್ಥಗಿತಗೊಂಡಿರುವ ವಿಶ್ವಕರ್ಮ ಕಾರ್ಪೆಂಟರಿ ಅಂಡ್ ಸ್ಮಿತಿ ಕ್ರಾಫ್ಟ್ ಇಂಡಸ್ಟ್ರೀಯಲ್ ಕೋ ಅಪರೇಟಿವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ದಿನಾಂಕ 28.7.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, / ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಆಡಳಿತ ಮಂಡಳಿ ಸದಸ್ಯರ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಣೆ ನೀಡಿದ್ದು ಈ ಬಗ್ಗೆ ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-3/2005-06, ದಿನಾಂಕ: 24ನೇ ಆಗಸ್ಟ್ 2005**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ವಿಶ್ವಕರ್ಮ ಕಾರ್ಪೆಂಟರಿ ಅಂಡ್ ಸ್ಮಿತಿ ಕ್ರಾಫ್ಟ್ ಇಂಡಸ್ಟ್ರೀಯಲ್ ಕೋ ಅಪರೇಟಿವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ-ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 24.8.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1281 ಸಹಕಾರ ಸಂಘಗಳ ಉಪನಿಬಂಧಕರು ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ವಿಷಯ:** ಸ್ಥಗಿತಗೊಂಡಿರುವ ಕೆ.ಎಸ್.ಆರ್.ಟಿ.ಸಿ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ದಿನಾಂಕ 14.2.2005 ಮತ್ತು 28.7.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, / ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಆಡಳಿತ ಮಂಡಳಿ ಸದಸ್ಯರ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಣೆ ನೀಡಿದ್ದು ಈ ಬಗ್ಗೆ ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-35/2004-05, ದಿನಾಂಕ: 24ನೇ ಆಗಸ್ಟ್ 2005**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಎಸ್.ಆರ್.ಟಿ.ಸಿ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ-ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 24.8.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1282 ಸಹಕಾರ ಸಂಘಗಳ ಉಪನಿಬಂಧಕರು ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ವಿಷಯ:** ಸ್ಥಗಿತಗೊಂಡಿರುವ ಅಲ್ಪತಾ ತೋಟಗಾರಿಕೆ ಅಭಿವೃದ್ಧಿ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ದಿನಾಂಕ 11.2.2005 ಮತ್ತು 28.7.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, / ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಆಡಳಿತ ಮಂಡಳಿ ಸದಸ್ಯರ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಣೆ ನೀಡಿದ್ದು ಈ ಬಗ್ಗೆ ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-01/2005-06, ದಿನಾಂಕ: 24ನೇ ಆಗಸ್ಟ್ 2005**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅಲ್ಪತಾ ತೋಟಗಾರಿಕೆ ಅಭಿವೃದ್ಧಿ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ-ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 24.8.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1283 ಸಹಕಾರ ಸಂಘಗಳ ಉಪನಿಬಂಧಕರು ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಸಮಾಪನೆಯಲ್ಲಿರುವ ಸ್ವಯಂ ಉದ್ಯೋಗ ಕೈಗಾರಿಕಾ ಮಾರುಕಟ್ಟೆ ಮತ್ತು ಸಂಸ್ಕರಣ ಸಹಕಾರ ಸಂಘ ನಿ., ಬೆಂಗಳೂರು ಇದರ ನೋಂದಣಿ ಕ್ರಮಾಂಕ: ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಸಮಾಪನಾದೇಶ ಸಂ. ಡಿಎಲ್‌ಎಸ್/7/82-83 ದಿನಾಂಕ: 16.6.1984.
2. ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ಇವರ ಪತ್ರ ಸಂ:ಡಿಆರ್‌ಬಿ-1/ಎಲ್‌ಕ್ಯೂಡಿ 3/95-96 ದಿನಾಂಕ: 28.10.2004, 13.12.2004 ಹಾಗೂ ದಿನಾಂಕ: 21.4.2005.
3. ಸಮಾಪನಾಧಿಕಾರಿಗಳು ಇವರ ಅಂತಿಮ ಸಭೆ ನಡವಳಿಕೆಗಳು ದಿನಾಂಕ 13.8.2002.

**ಪೀಠಿಕೆ:**

ಸ್ವಯಂ ಉದ್ಯೋಗ ಕೈಗಾರಿಕೆ ಮಾರುಕಟ್ಟೆ ಮತ್ತು ಸಂಸ್ಕರಣ ಸಹಕಾರ ಸಂಘ ನಿ., ಬೆಂಗಳೂರು ಈ ಸಹಕಾರ ಸಂಘವು ನೊಂದಣಿ ಕ್ರ.ಸಂ.ಬಿ/ಎಆರ್‌ಸಿ-1/1798/70-71 ದಿನಾಂಕ: 25.1.1970 ರನ್ವಯ ನೊಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಬೆಂಗಳೂರು ನಗರ ಹಾಗೂ ಹೆಚ್.ಎ.ಎಲ್., ಬಿ.ಇ.ಎಲ್., ಹೆಚ್.ಎಂ.ಟಿ., ಐ.ಟಿ.ಐ ಮತ್ತು ಕಂಟೋನ್ಮೆಂಟ್ ಟೌನ್‌ಷಿಪ್ ಪ್ರದೇಶಗಳಿಗೆ ಸೀಮಿತವಾಗಿರುತ್ತದೆ. ಸದರಿ ಸಂಘವು ತನ್ನ ಪೋಟಾ ನಿಯಮಗಳಲ್ಲಿ ಅಳವಡಿಸಿರುವ ಉದ್ದೇಶಗಳನ್ನು ಈಡೇರಿಸುವಲ್ಲಿ ಸಂಪೂರ್ಣವಾಗಿ ವಿಫಲವಾಗಿ ಸ್ಥಗಿತಾವಸ್ಥೆಯಲ್ಲಿದ್ದ ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)(ಬಿ) ರನ್ವಯ ಈ ಆದೇಶ ಸಂ:ಡಿಎಲ್‌ಎಸ್/7/82-83 ದಿನಾಂಕ: 16.6.1984ರಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ಉಪನಿಬಂಧಕರು ಬೆಂಗಳೂರು-1 ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (3)ರಂತೆ ಸಮಾಪನಾಧಿಕಾರಿಗಳು ದಿನಾಂಕ: 13.8.2002ರಂದು ನಡೆಸಿದ ಅಂತಿಮ ಸಭೆಯ ನಡವಳಿಕೆಯಲ್ಲಿ ತಿಳಿಸಿರುವಂತೆ ಸಂಘದ ಆಸ್ತಿ ಕಡೆ ಇರುವ ರೂ.70,665=00 ಗಳಲ್ಲಿ ಶೇಕಡ 50ರಷ್ಟನ್ನು ರಾಜ್ಯ ಸರ್ಕಾರದ ಸಾಲಕ್ಕೂ ಉಳಿದ ಶೇಕಡ 50ರಷ್ಟನ್ನು ಅಪೆಕ್ಸ್ ಬ್ಯಾಂಕಿನ ಸಾಲಕ್ಕೂ ಹೊಂದಾಣಿಕೆ ಮಾಡಿಕೊಳ್ಳಲು ಸರ್ಕಾರದ ಅನುಮತಿ ಎಂದು ಸರ್ಕಾರದ ಪತ್ರ ಸಂ:ಸಮಾತು:7:ಸಿಎಂಎಂ:95 ದಿನಾಂಕ:12.3.2001ರಲ್ಲಿ ತಿಳಿಸಿರುತ್ತದೆ. ಇದರಂತೆ ಕ್ರಮ ಕೈಗೊಂಡಿದ್ದು, ಈ ಸಂಘದಲ್ಲಿ ಬೇರಾವುದೇ ಆಸ್ತಿ ಇಲ್ಲದೇ ಇರುವ ಪ್ರಯುಕ್ತ ಎಲ್ಲಾ ಲೆಕ್ಕಪುಸ್ತಕಗಳು ದಾಖಲಾತಿಗಳು ಲಭ್ಯವಿಲ್ಲದೆ ಇರುವುದರಿಂದ, ಈ ಸಹಕಾರ ಸಂಘವನ್ನು ಸಮಾಪನೆಯಲ್ಲಿ ಉಳಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿರುವುದಿಲ್ಲ. ಆದ್ದರಿಂದ ಸಂಘದ ನೋಂದಣಿಯನ್ನು ರದ್ದುಪಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂ:ಡಿಎಲ್‌ಎಸ್/07/82-83, ದಿನಾಂಕ: 16ನೇ ಆಗಸ್ಟ್ 2005**

ಪೀಠಿಕೆಯಲ್ಲಿ ಪ್ರತಿಪಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈ.ಮತ್ತು ಇ.) ಕೇಂದ್ರ ಕಛೇರಿ ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರಡಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ವಯಂ ಉದ್ಯೋಗ ಕೈಗಾರಿಕಾ ಮಾರುಕಟ್ಟೆ ಮತ್ತು ಸಂಸ್ಕರಣ ಸಹಕಾರ ಸಂಘ ನಿ., ಬೆಂಗಳೂರು ಇದರ ನೋಂದಣಿ ಸಂ:ಬಿ/ಎಆರ್‌ಸಿ-1:1798/70-71 ದಿ:25.1.1970 ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು, ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 16.8.2005 ರಂದು ಹೊರಡಿಸಲಾಗಿದೆ.

**ಬಿ. ನಾಗರಾಜ**

ಪಿ.ಆರ್. 1284 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ನಿ.441) ಹಾಗೂ ವಸೂಲಾಧಿಕಾರಿಗಳು,**

**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನಡವಳಿಕೆಗಳು**

**ವಿಷಯ:** ಸಿಂಧನೂರು ಅರ್ಬನ್ ಸೌಹಾರ್ದ ಕೋ-ಆಪರೇಟಿವ್ ಬ್ಯಾಂಕ್ ಲಿ., ಸಿಂಧನೂರು ಇದರ ಅಮಲ್ಜಾರಿ ಅರ್ಜಿ ಸಂಖ್ಯೆ:4/2003-04ಕ್ಕೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಕರ್ನಾಟಕ ರಾಜ್ಯ ಸಹಕಾರ ಸಂಘಗಳ ನಿಯಮಗಳು, ನಿಯಮ 38 (7) (ಎ)ರ ಪ್ರಕಾರ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:**
1. ದಾವಾ ಸಂಖ್ಯೆ: 08/2002-03
2. ಅಮಲ್ಜಾರಿ ಅರ್ಜಿ ಸಂಖ್ಯೆ: 04/2003-04
3. ಮಾರಾಟಾಧಿಕಾರಿಯವರ ವರದಿ ದಿನಾಂಕ: 7.4.2005.

**ಪ್ರಸ್ತಾವನೆ:**

ಮೆ॥ ಶ್ರೀನಿವಾಸ ಇಂಡಸ್ಟ್ರೀಸ್, ಮಾಲಿಕರು: ಶ್ರೀನಿವಾಸ ಜಿ. ತಂ॥ ವಿಶ್ವನಾಥಂ ಸಾ॥ ಪಗಡದಿನ್ನಿ ಕ್ಯಾಂಪ (ತಾ॥ ಸಿಂಧನೂರು) ಇವರು ಸಿಂಧನೂರು ಅರ್ಬನ್ ಸೌಹಾರ್ದ ಕೋ-ಆಪರೇಟಿವ್ ಬ್ಯಾಂಕ್ ಲಿ., ಸಿಂಧನೂರು ಈ ಬ್ಯಾಂಕಿನಿಂದ ದಿನಾಂಕ:27.1.2001 ರಂದು ರೂ.12,80,000/- ಗಳನ್ನು (ಹನ್ನೆರಡು ಲಕ್ಷ ಎಂಬತ್ತು ಸಾವಿರ ರೂಪಾಯಿಗಳು ಮಾತ್ರ) ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರನ್ವಯ ಸಹಕಾರಿಗಳ ಉಪ ನಿಬಂಧಕರು ರಾಯಚೂರು ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ:08/2002-03 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರಿಗಳ ಉಪ ನಿಬಂಧಕರು ರಾಯಚೂರು ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶದನ್ವಯ ಸಿಂಧನೂರು ಅರ್ಬನ್ ಸೌಹಾರ್ದ ಕೋ-ಆಪರೇಟಿವ್ ಬ್ಯಾಂಕ್ ಲಿ., ಸಿಂಧನೂರು ಇದರ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯವರು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 34 (1)ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಿಂಧನೂರು ಈ ಕಛೇರಿಯಲ್ಲಿ ಅಮಲ್ಜಾರಿ ಅರ್ಜಿ ಸಂಖ್ಯೆ:04/2003-04 ರಂತೆ ಕ್ರಮ ಕೈಗೊಳ್ಳಲು ದಾಖಲು ಮಾಡಲಾಗಿತ್ತು. ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಸಾಲಕ್ಕೆ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ:21.3.2005 ರಂದು ಸಾರ್ವಜನಿಕ ಹರಾಜಿಗೆ ತರಲಾಗಿತ್ತು. ಸದರಿ ದಿನ ನಡೆಸಿದ ಹರಾಜಿನಲ್ಲಿ 8 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಪಿ. ಜಿಯಾವುದ್ದೀನ್ ತಂ॥ ಪಿ. ಹೊನ್ನೂರಸಾಬ ಸಾ॥ ಬಳ್ಳಾರಿ ಇವರು ರೂ. 3,76,000/- ಗಳಿಗೆ (ಮೂರು ಲಕ್ಷ ಎಪ್ಪತ್ತಾರು ಸಾವಿರ ರೂಪಾಯಿಗಳು ಮಾತ್ರ) ಬಿಡ್ಡು ಮಾಡಿದ್ದು ಅತೀ ಹೆಚ್ಚಿನ ಬಿಡ್ಡುದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿಯನ್ವಯ ರೂ. 11,27,507/- ಗಳು (ಬಡ್ಡಿ ಮತ್ತು ಇತರೆ ವೆಚ್ಚಗಳು ಸೇರಿ) ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ. 3,76,000/- ಗಳ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಪಿ. ಜಿಯಾವುದ್ದೀನ್ ತಂ॥ ಪಿ. ಹೊನ್ನೂರಸಾಬ ಸಾ॥ ಬಳ್ಳಾರಿ ಇವರು ಬಿಡ್ಡಿನ ಮೊತ್ತದ ಶೇಕಡಾ 15 ರೂ. 56,400/- ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಬಾಕಿ ಮೊತ್ತವನ್ನು ದಿನಾಂಕ 02.04.2005 ರಂದು ರೂ. 3,19,600/- ಗಳನ್ನು ಪಾವತಿಮಾಡಿರುತ್ತಾರೆ.

ಸಿಂಧನೂರು ಅರ್ಬನ್ ಸೌಹಾರ್ದ ಕೋ-ಆಪರೇಟಿವ್ ಬ್ಯಾಂಕ್ ಲಿ., ಸಿಂಧನೂರು. ಇದರ ಮಾರಾಟಾಧಿಕಾರಿಯವರು ದಿನಾಂಕ:21.3.2005 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ, ಹಾಗೂ ಶ್ರೀಮತಿ ವೆಂಕಟಲಕ್ಷ್ಮೀ ಗಂ॥ ಚಿಟ್ಟೂರಿ ರಾಘವಯ್ಯ ಸಾ॥ ಪಗಡದಿನ್ನಿ ಕ್ಯಾಂಪ (ತಾ॥ ಸಿಂಧನೂರು) ಇವರ ಸ್ಥಿರಾಸ್ತಿಯನ್ನು ಶ್ರೀ ಪಿ. ಜಿಯಾವುದ್ದೀನ್ ತಂ॥ ಪಿ. ಹೊನ್ನೂರಸಾಬ ಸಾ॥ ಬಳ್ಳಾರಿ ಇವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3)ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ: 21.3.2005ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ 8 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಪಿ. ಜಿಯಾವುದ್ದೀನ್ ತಂ॥ ಪಿ. ಹೊನ್ನೂರಸಾಬ ಸಾ॥ ಬಳ್ಳಾರಿ ಇವರಿಗೆ ರೂ. 3,76,000/- ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ:21.3.2005 ರಂದು ನಡೆಸಲಾದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನು ಬದ್ಧವಾಗಿದೆ ಎಂದು ಕಂಡು ಬಂದಿರುವುದರಿಂದ ಹಾಗೂ ಈ ಪೂರ್ಣ ಮಾರಾಟ ಪ್ರಕ್ರಿಯೆಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959, ನಿಯಮಗಳು 1960ರ ಪ್ರಕಾರ ಜರುಗಿದ್ದು, ಮಾರಾಟ ಸ್ಥಿರೀಕರಣ ಸಮಯದಲ್ಲಿ ಕರ್ನಾಟಕ ರಾಜ್ಯ ಸೌಹಾರ್ದ ಸಹಕಾರಿ ಕಾಯ್ದೆ 1997, ನಿಯಮಗಳು 2004 ಹಾಲಿ ಜಾರಿಯಲ್ಲಿರುವ ಪ್ರಯುಕ್ತ ಈ ನಿಯಮಗಳ ಪ್ರಕಾರ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ ಸಿ.ಇ.ಪಿ. ಸಂಖ್ಯೆ: ಎ.ಆರ್.ಇ/ಯು.ಬಿ.ಎಫ್/05/04-05 ದಿನಾಂಕ: 8ನೇ ಆಗಸ್ಟ್ 2005**

ಎಸ್.ಎಸ್. ಕಟಗೇರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ-441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಕರ್ನಾಟಕ ರಾಜ್ಯ ಸೌಹಾರ್ದ ಸಹಕಾರಿ ನಿಯಮಗಳು 2004ರ ನಿಯಮ 17(7)ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ:04/2003-04ರಲ್ಲಿ ಮೆ॥ ಶ್ರೀನಿವಾಸ ಇಂಡಸ್ಟ್ರೀಸ್, ಮಾಲೀಕರು: ಶ್ರೀನಿವಾಸ ಜಿ. ತಂ॥ ವಿಶ್ವನಾಥಂ ಸಾ॥ ಪಗಡದಿನ್ನಿ ಕ್ಯಾಂಪ, ಸದಸ್ಯತ್ವ ಸಂಖ್ಯೆ. ನಂ. 661 ಇವರಿಗೆ ಭದ್ರತೆಯಾಗಿ ನೀಡಿರುವ ಶ್ರೀಮತಿ ವೆಂಕಟಲಕ್ಷ್ಮೀ ಗಂ॥ ಚಿಟ್ಟೂರಿ ರಾಘವಯ್ಯ ಸಾ॥ ಪಗಡದಿನ್ನಿ ಕ್ಯಾಂಪ (ತಾ॥ ಸಿಂಧನೂರು) ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ 21.3.2005 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಪಿ. ಜಿಯಾವುದ್ದೀನ್ ತಂ॥ ಪಿ. ಹೊನ್ನೂರಸಾಬ ಸಾ॥ ಬಳ್ಳಾರಿ ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ. 7,71,375/- ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ಥಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕಾ ಮುಳ್ಳೂರು (ಇ. ಜೆ.) ಗ್ರಾಮದಲ್ಲಿರುವ ವ್ಯವಸಾಯ ಭೂಮಿ ಸರ್ವೆ ನಂ. 17/ಅ, ವಿಸ್ತೀರ್ಣ 02 ಎಕರೆ 14 ಗುಂಟೆ ಇದರ ಚಕ್ಕುಬಂದಿ

| | | |
|---|---|---|
| ಪೂರ್ವಕ್ಕೆ | : | ಜಿ. ಸುಬ್ಬಾರಾವ ಇವರ ಹೊಲ |
| ಪಶ್ಚಿಮಕ್ಕೆ | : | ಸಿದ್ದಲಿಂಗಪ್ಪ ಇವರ ಹೊಲ |
| ಉತ್ತರಕ್ಕೆ | : | ಕೆ. ಸುಬ್ಬಣ್ಣ ಇವರ ಹೊಲ |
| ದಕ್ಷಿಣಕ್ಕೆ | : | ಉಪ್ಪಾರ ರಾಮಣ್ಣ ಇವರ ಹೊಲ |

ಮಾರಾಟದ ಮೊಬಲಗು ರೂ. 3,76,000/-

ಮಾರಾಟ ಮಾಡಿದ ದಿನಾಂಕ: 21.3.2005

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 8.8.2005 ರಂದು ನೀಡಲಾಗಿದೆ.

ಸಹಕಾರಿಗಳ ಸಹಾಯಕ ರಿಜಿಸ್ಟ್ರಾರ್ (ನಿ.441) ಹಾಗೂ ವಸೂಲಾಧಿಕಾರಿಗಳು

ಪಿ.ಆರ್. 1285 ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ನಂ.132, ಕೆ.ಹೆಚ್. ರಸ್ತೆ, ಬೆಂಗಳೂರು-560 027.